*The Department of Public Instruction Bombay.*

AN

# ELEMENTARY GEOGRAPHY

## PART III



(GEOGRAPHY OF THE WORLD)

BY

VENKAT RANGO KATTI,

*Kanarese Translator, Ed. D.*

Copies 5,000



**1924.**



D. A. SAVANT,

*Publisher,* BELGAUM.

Price 5 Annas.

ಮುಂಬಯಿ ಇಲಾಖೆಯೊಳಗಿನ ಸರಕಾರಿ ವಿದ್ಯಾಶಾಲಾಖಾತೆ

# ಭೂಗೋಲವಿದ್ಯೆ.

## ೩ ನೆಯ ಭಾಗ.

## ( ಸಮಗ್ರ-ಭೂಮಿಯ ವರ್ಣನೆ )

ಕನ್ನಡ ತ್ರಾನ್ಸಲೇಟರರಾದ

ವೆಂಕಟ ರಂಗೋ ಕಟ್ಟಿಯವರು.

ಭಾಷಾಂತರಿಸಿದ್ದು,

ದ. ಅ. ಸಾಂವತ, ಇವರು ತಮ್ಮ ಶ್ರೀರಾಮತತ್ವ-ಪ್ರಕಾಶ ಮುದ್ರಾಲಯದಲ್ಲಿ

ಮುದ್ರಿಸಿ ಅಲ್ಲಿಯೇ ಪ್ರಸಿದ್ಧ ಮಾಡಿದರು.

ಬೆಳಗಾಂವ.

ಪ್ರತಿಗಳು ೨೦೦೦.

೧೯೨೪.

ದ. ಅ. ಸಾವಂತ,

ಪಬ್ಲಿಶರ, ಬೆಳಗಾಂವ.

ಕ್ರಯ ೫ ಆಣೆ.



# ಪ್ರಸ್ತಾವನೆ.



ಭೂಗೋಲ ಕಲಿಸುವ ರೀತಿಯನ್ನು ಮೊದಲನೆಯ ಭಾಗದ ಪ್ರಸ್ತಾವನೆಯಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ. ನಕಾಶದ ಮೇಲೆ ಹೊಳೆ, ಪರ್ವತ, ಪಟ್ಟಣ ಮುಂತಾದವುಗಳನ್ನು ತೋರಿಸುವದರಿಂದ ಭೂಗೋಲ ವಿದ್ಯದ ಅಭ್ಯಾಸವು ಪೂರ್ಣವಾಗುವದಿಲ್ಲ, ನಾಲ್ಕು ಖಂಡಗಳ ಮತ್ತು ಹಿಂದುಸ್ತಾನ, ಇಂಗ್ಲಂಡ, ಮುಂತಾದ ಪ್ರಮುಖ ದೇಶಗಳ ನಕಾಶವನ್ನು ಸರಿಯಾಗಿ ತೆಗೆಯಲಿಕ್ಕೆ ಈ ಪುಸ್ತಕವನ್ನು ಕಲಿಯುವ ವಿದ್ಯಾರ್ಥಿಗಳು ಕಲಿತಿರಲಿಕ್ಕೆ ಬೇಕು.

ಭೂಮಿಯ ಸ್ವರೂಪ, ಹವೆಯ ಶೀತೋಷ್ಣ, ಹೊಳೆಗಳ ಪ್ರಸಾರ, ಸಮುದ್ರದ ನೆರೆ, ಇವುಗಳ ಪರಿಸ್ಥಿತಿ ಇದ್ದಂತೆ ಮನುಷ್ಯ ಜಾತಿಯ ಸ್ಥಿತಿ ರೀತಿಗಳಾಗುತ್ತವೆ. ಸಮುದ್ರದ ನೆರೆಯಲ್ಲಿ ಇರುವವರು ನಾವಿಕರಾಗುತ್ತಾರೆ. ಬಡಭೂಮಿಯಲ್ಲಿ ವಾಸಿಸುವವರು ಉದ್ಯೋಗಿಗಳಾಗುತ್ತಾರೆ. ಉಷ್ಣಪ್ರದೇಶದಲ್ಲಿ ವಾಸಿಸುವವರು ಸೋಮಾರಿಗಳಾಗುತ್ತಾರೆ. ಫಲವುಳ್ಳ ಭೂಮಿಯಲ್ಲಿ ವಾಸಿಸುವವರು ಒಕ್ಕಲತನಕ್ಕೆ ಮೆಚ್ಚುತ್ತಾರೆ. ಇವೇ ಮೊದಲಾದ ಮನುಷ್ಯ ಜಾತಿಯ ಸ್ವಭಾವಗುಣಗಳಲ್ಲಿ ಭಿನ್ನತ್ವವನ್ನುಂಟು ಮಾಡುವ ಕಾರಣಗಳನ್ನು ಹುಡುಕುವ ಚಟವನ್ನು ಶಿಕ್ಷಕರು ವಿದ್ಯಾರ್ಥಿಗಳಿಗೆ ಹಚ್ಚಿದರೆ, ಅವರಿಗೆ ಭೂಗೋಲ ವಿದ್ಯದ ಗೌರವ ತಿಳಿದು, ಅವರ ಮನಸಿನಲ್ಲಿ ಹೊಸ ಪ್ರಕಾಶ ಉಂಟಾಗುವದು, ಅವರ ಶೋಧ ಬುದ್ಧಿ ಬೆಳೆಯುವದು.

ನಕಾಶದ ನಾಲ್ಕೂ ಅಂಚುಗಳಲ್ಲಿ ಅಂಕೆಗಳು ಬರೆಯಲ್ಪಟ್ಟಿರುತ್ತವೆ. ಅವನ್ನು ಶಿಕ್ಷಕರಾಗಲಿ ವಿದ್ಯಾರ್ಥಿಗಳಾಗಲಿ ಬಹಳವಾಗಿ ಲಕ್ಷಿಸುವದಿಲ್ಲ. ಯಾಕೆಂದರೆ ಅವರಿಗೆ ಅವುಗಳ ಪ್ರಯೋಜನವು ಚನ್ನಾಗಿ ತಿಳಿದಿರುವದಿಲ್ಲ.

ನಕಾಶದ ಎಡಬಲಗಳಲ್ಲಿ ಬರೆದ ಅಂಕೆಗಳಿಗೆ ಅಕ್ಷಾಂಶಗಳೆನ್ನುವರು; ತಲೆಯ ಮೇಲೆಯೂ ಕೆಳಗೂ ಬರೆದ ಅಂಕೆಗಳಿಗೆ ರೇಖಾಂಶಗಳೆನ್ನುವರು; ಅಕ್ಷಾಂಶಗಳ ಮಾಪು ಎಲ್ಲ ಕಡೆಯಲ್ಲಿಯೂ ಒಂದೇ ಸಮನಾಗಿ ೬೯ ಮೈಲಿನದಿರುತ್ತದೆ; ರೇಖಾಂಶಗಳ ಮಾಪು ಉತ್ತರಕ್ಕೆ ಹೋದ ಹಾಗೆ ಕಡಿಮೆಯಾಗುತ್ತಾ ಹೋಗುತ್ತದೆ. ಈ ವಿವರವು ನಕಾಶದ ಮೇಲೆ ಅಡ್ಡ, ಉದ್ದ, ಕೊರೆದ ರೇಖೆಗಳನ್ನು ನೋಡಿದ ಕೂಡಲೆ ತಿಳಿಯುವ ಹಾಗಿದೆ.

ಅಕ್ಷಾಂಶಗಳ ಸಹಾಯದಿಂದ ಪರ್ವತ ಹೊಳೆ ಮುಂತಾದವುಗಳ ಉದ್ದಳತೆಯನ್ನೂ ಎರಡು ಸ್ಥಳಗಳ ನಡುವಿನ ಅಂತರವನ್ನೂ ಹೇಳಲಿಕ್ಕೆ ಬರುತ್ತದೆ. ಹೇಳಿದ ಎರಡು ಸ್ಥಳಗಳ ಮೇಲೆ ಒಂದು ದಾರವನ್ನು ಹಚ್ಚಿ, ದಾರಕ್ಕೆ ಗುರ್ತು

ಮಾಡಿ, ಆ ಗುರ್ತಗಳನ್ನು ಅಕ್ಷಾಂಶಗಳ ಅಂಕೆಗಳ ಮೇಲೆ ಹಚ್ಚಿ ನೋಡಬೇಕು. ದಾರದೊಳಗೆ ಬರುವ ಅಂಕೆಗಳಿಗೆ ೬೯ ರಿಂದ ಗುಣಿಸಿದರೆ, ಹೇಳಿದ ಎರಡು ಸ್ಥಳಗಳ ನಡುವೆ ಇಷ್ಟು ಮೈಲು ಅಂತರವೆಂದು ತಿಳಿಯುತ್ತದೆ. ಇದೇ ರೀತಿ ಪರ್ವತ, ಹೊಳೆಗಳ ಉದ್ದಳತೆಯನ್ನು ತೆಗೆಯಬಹುದು.

ಎಂಥಾದಾದರೂ ವರ್ತುಲದಲ್ಲಿ ೩೬೦ ಅಂಶಗಳು ಕಲ್ಪಿಸಲ್ಪಡುವಂತೆ ಭೂಮಿಯ ಮೇಲಿನ ಯಾವತ್ತು ರೇಖೆಗಳು ವರ್ತುಳಾಗುವ ಕಾರಣ ಅವುಗಳಲ್ಲಿ ೩೬೦ ಅಂಶಗಳು ಎಣಿಸಲ್ಪಡುತ್ತವೆ. ಸೂರ್ಯನು ಭೂಮಿಯ ಸುತ್ತು ಮುತ್ತು ೨೪ ತಾಸಗಳಲ್ಲಿ ಒಂದು ಪ್ರದಕ್ಷಿಣೆ ಮಾಡುವಂತೆ ತೋರುವದರಿಂದ, ಒಂದು ತಾಸಿನಲ್ಲಿ ಭೂಪೃಷ್ಠದ ಮೇಲಿನ ೧೫ ಅಂಶಗಳನ್ನು, ಅಥವಾ ೪ ಮಿನಿಟುಗಳಲ್ಲಿ ಒಂದು ಅಂಶವನ್ನು ಕ್ರಮಿಸತ್ತಾನೆಂದು ಸಿದ್ಧವಾಗುತ್ತದೆ. ಈ ಅಂಶಗಳು ರೇಖಾಂಶಗಳೆಂದು ಹೇಳುವ ಅವಶ್ಯವಿಲ್ಲ.

ಅದ್ದರಿಂದ ಹೇಳಿದ ಎರಡು ಸ್ಥಳಗಳ ರೇಖಾಂಶಗಳನ್ನು ನಕಾಶದ ತಲೆಯ ಮೇಲಾಗಲಿ ಕೆಳಗಾಗಲಿ ನೋಡಿ, ಸ್ಥಳಗಳ ನಡುವೆ ಬರುವ ಅಂಶಗಳಿಗೆ ೪ ರಿಂದ ಗುಣಿಸಿದರೆ, ಆ ಎರಡು ಸ್ಥಳಗಳಲ್ಲಿ ಸೂರ್ಯೋದಯ ಕಾಲದಲ್ಲಿ ಉಂಟಾಗುವ ಕಾಲಾಂತರವು ಹೊರಡುತ್ತದೆ. ಪೂರ್ವಕ್ಕಿರುವ ಸ್ಥಳದಲ್ಲಿ ಮೊದಲು ಸೂರ್ಯೋದಯವಾಗಿ, ಆ ಕಾಲಾಂತರದಷ್ಟು ಮಿನಿಟುಗಳು ನಂತರ ಪಶ್ಚಿಮಕ್ಕಿರುವ ಸ್ಥಳದಲ್ಲಿ ಸೂರ್ಯೋದಯವಾಗುತ್ತದೆ. ಉದಾಹರಣಾರ್ಥವಾಗಿ ಮದ್ರಾಸದ ರೇಖಾಂಶ ೮೦, ಮುಂಬಯಿಯ ರೇಖಾಂಶ ೭೩; ಎರಡರ ನಡುವೆ ಅಂತರ ಅಂಶ ೭; ಇದಕ್ಕೆ ೪ ರಿಂದ ಗುಣಿಸಿದರೆ ೨೮ ಮಿನಿಟು ಬರುತ್ತದೆ. ಮದ್ರಾಸವು ಪೂರ್ವಕ್ಕಿರುತ್ತದಾದ್ದರಿಂದ ಮದ್ರಾಸದಲ್ಲಿ ಸೂರ್ಯೋದಯವಾದ ಮೇಲೆ ೨೮ ಮಿನಿಟದ ನಂತರ ಮುಂಬಯಿಯಲ್ಲಿ ಸೂರ್ಯೋದಯವಾಗುತ್ತದೆಂದು ಸಿದ್ಧವಾಗುತ್ತದೆ.

ಈ ಪ್ರಕಾರ ವಿದ್ಯಾರ್ಥಿಗಳ ಶೋಧಕ ಬುದ್ಧಿ ಜಾಗ್ರತವಾಗುವಂತೆ ನಕಾಶವನ್ನು ಕಲಿಸಿದರೆ, ಅವರಿಗೆ ಆನಂದವಾಗೀ ಅವರು ಮನಮುಟ್ಟಿ ಭೂಗೋಲವಿದ್ಯವನ್ನು ಉಲ್ಲಾಸದಿಂದ ಕಲಿಯುವರು.

ಧಾರವಾಡ
ಅಗಟಂಬರ
೧೯೦೭

V. R. KATTI.

# ಅನುಕ್ರಮಣಿಕೆ.



ಕನ್ನಡ ಶಾಲೆಗಳಿಗಾಗಿ

# ಭೂಗೋಲ-ವಿದ್ಯವು.



## ೧ ನೆಯ ಭಾಗ.

## ಸಾಮಾನ್ಯ ವಿವರಣೆ.

### ೧ ನೆಯ ಪ್ರಕರಣ.

### ಭೂಮಿಯ ಆಕಾರವು.

ಭೂಮಿ, ಅದರ ಮೇಲಿನ ಮಹಾಸಾಗರಗಳು, ದೇಶಗಳು, ಆ ದೇಶಗಳೊಳಗಿನ ಜನರು ಇವುಗಳ ವರ್ಣನೆಗೆ ಭೂಗೋಲವಿದ್ಯವೆನ್ನುತ್ತಾರೆ.

ಭೂಮಿಯು ಗೋಲರೂಪವಿರುತ್ತದೆಂಬ ಸಂಗತಿಯು ಕೆಳಗೆ ಬರೆದ ಪ್ರಮಾಣಗಳಿಂದ ಸಿದ್ಧವಾಗುತ್ತದೆ.

೧. ಭೂಪ್ರದಕ್ಷಿಣೆಯನ್ನು ಮಾಡುವವರು ತಮ್ಮ ಹಡಗುಗಳ ದಿಕ್ಕು ಬದಲು ಮಾಡದೆ ಸಾಗಿದರೆ, ತಾವು ಮೊದಲು ಹೊರಟ ಸ್ಥಳಕ್ಕೆ ಮರಳಿ ಬರುತ್ತಾರೆ.

೨. ಚಂದ್ರಗ್ರಹಣದಲ್ಲಿ ಭೂಮಿಯ ನೆರಳು ಚಂದ್ರನ ಮೇಲೆ ವರ್ತುಲಾಕಾರವಾಗಿ ಬೀಳುತ್ತದೆ. ನಮ್ಮ ಜ್ಯೋತಿ:ಶಾಸ್ತ್ರದಲ್ಲಿ ಈ ಮಾತು ಹೇಳಿರುತ್ತದೆ.

೩. ಉತ್ತರದಿಕ್ಕಿಗೆ ಹೋದ ಹಾಗೆ ಧ್ರುವನಕ್ಷತ್ರವು ಆಕಾಶದಲ್ಲಿ ಹೆಚ್ಚು ಹೆಚ್ಚು ಮೇಲಕ್ಕೆ ಏರುತ್ತದೆ.

೪. ಪೂರ್ವದಿಕ್ಕಿನಲ್ಲಿ ಇರುವವರಿಗೆ ಸೂರ್ಯೋದಯವಾದ ಬಳಿಕ ಅವರ ಪಶ್ಚಿಮಕ್ಕೆ ಇರುವವರಿಗೆ ಸೂರ್ಯೋದಯವಾಗುತ್ತದೆ. ಉದಾ:—ಮದ್ರಾಸದಲ್ಲಿ ಸೂರ್ಯೋದವಾದ ಸುಮಾರು ಅರ್ಧ ತಾಸಿನ ಮೇಲೆ ಮುಂಬಯಿಯಲ್ಲಿ ಆಗುತ್ತದೆ.

೫. ಬೈಲೊಳಗಿನ ಗಿಡಗಳಿಂದ ದೂರ ದೂರ ಹೋದ ಹಾಗೆ ಅವುಗಳ ಬುಡದ ಭಾಗವು ಅದೃಶ್ಯವಾಗುತ್ತ ಹೋಗಿ, ಕಡೆಯಲ್ಲಿ

ತುದಿಯೂ ಅದೃಶ್ಯವಾಗುತ್ತದೆ. ಇದೇ ಮೇರೆಗೆ ಸಮುದ್ರದೊಳಗೆ ಹೋಗುವ ಹಡಗುಗಳನ್ನು ದಂಡೆಯ ಮೇಲೆ ನಿಂತು ನೋಡುವ ವರಿಗೆ ಅವುಗಳ ಕೆಳಗಿನ ಭಾಗವು ಮೊದಲು ಕಾಣದ ಹಾಗಾಗಿ ಬರೆ ಪಟಸ್ತಂಭಗಳು ಮಾತ್ರ ಕಾಣಿಸುತ್ತವೆ. ಮುಂದೆ ಅವು ಸಹ ಅದೃಶ್ಯವಾಗುತ್ತವೆ.

೬. ಬೈಲೊಳಗೆ ನಿಂತು ನೋಡುವ ಮನುಷ್ಯನಿಗೆ ಸುತ್ತುಮುತ್ತು ಮೂರು ಮೈಲಿನ ವರಗೆ ಮಾತ್ರ ಭೂಮಿ ಕಾಣುತ್ತದೆ. ಆದರಾಚೆಯ ಭೂಮಿಯೂ, ವೃಕ್ಷ ಪರ್ವತಾದಿಗಳ ಬುಡಗಳೂ ಕಾಣುವದಿಲ್ಲ

## ೨ ನೆಯ ಪ್ರಕರಣ.

## ದಿಕ್ಕುಗಳು.

ಶಿಕ್ಷಕನು ದಿಕ್ಕುಗಳನ್ನು ತಿಳಿಸಿ ಹೇಳುವಾಗ ಕೆಳಗೆ ಬರೆದ ಆಕೃತಿಯನ್ನು ಉಪಯೋಗಿಸಬೇಕು.

ಸೂರ್ಯೋದಯವಾಗುವ ದಿಕ್ಕು ಪೂರ್ವವು; ಸೂರ್ಯನು ಮುಳುಗುವ ದಿಕ್ಕು ಪಶ್ಚಿಮವು; ಪೂರ್ವಕ್ಕೆ ಮೋರೆ ಮಾಡಿ ನಿಂತರೆ, ಬಲಕ್ಕೆ ಆಗುವ ದಿಕ್ಕು ದಕ್ಷಿಣವು, ಎಡಕ್ಕೆ ಆಗುವ ದಿಕ್ಕು ಉತ್ತರವು.




ಉತ್ತರ-ಪೂರ್ವಗಳ ನಡುವಿನ ಮೂಲೆಗೆ ಈಶಾನ್ಯವೆನ್ನುತ್ತಾರೆ. ದಕ್ಷಿಣ-ಪೂರ್ವಗಳ ನಡುವಿನ ಮೂಲೆಗೆ ಆಗ್ನೇಯವೆನ್ನುತ್ತಾರೆ. ಉತ್ತರ-ಪಶ್ಚಿಮಗಳ ನಡುವಿನ ಮೂಲೆಗೆ ವಾಯುವ್ಯವೆನ್ನುತ್ತಾರೆ. ದಕ್ಷಿಣ-ಪಶ್ಚಿಮಗಳ ನಡುವಿನ ಮೂಲೆಗೆ ನೈಋತ್ಯವೆನ್ನುತ್ತಾರೆ.

## ೩ ನೆಯ ಪ್ರಕರಣ.

## ಭೂಗೋಲ-ವಿದ್ಯದೊಳಗಿನ ಶಬ್ದಗಳ ವ್ಯಾಖ್ಯೆಗಳು.

(ಪ್ರತಿಯೊಂದು ಶಬ್ದದ ವ್ಯಾಖ್ಯೆಯನ್ನು ಹೇಳಿದ ಕೂಡಲೆ ಶಿಕ್ಷಕನು ಹುಡುಗರಿಗೆ ಅವುಗಳ ಉದಾಹರಣೆಗಳನ್ನು ಕೇಳಬೇಕು.)

ಭೂಮಿಯ ಪೃಷ್ಠಭಾಗದ ಮೇಲೆ ಕೆಲವು ಕಡೆಯಲ್ಲಿ ನೀರೂ ಕೆಲವು ಕಡೆಯಲ್ಲಿ ನೆಲವೂ ಉಂಟು. ಆ ಪೃಷ್ಠಭಾಗದಲ್ಲಿ ನಾಲ್ಕುಸಮ ಭಾಗಗಳನ್ನು ಮಾಡಿದರೆ, ಸುಮಾರು ಮೂರು ಭಾಗಗಳಷ್ಟು ನೀರು, ಒಂದು ಭಾಗದಷ್ಟು ನೆಲವು ಆಗುವದು.

## ನೆಲವು.

ಹಲವು ದೇಶಗಳುಳ್ಳಂಥ ದೊಡ್ಡ ದೊಡ್ಡ ಭೂಪ್ರದೇಶಗಳಿಗೆ **ಖಂಡಗಳೆನ್ನು**ತ್ತಾರೆ.

ಎಲ್ಲಾ ಕಡೆಯಲ್ಲಿ ನೀರುಳ್ಳ ಒಣನೆಲದ ಪ್ರದೇಶಕ್ಕೆ **ದ್ವೀಪ** ಅಥವಾ **ನಡುಗಡ್ಡೆ** ಅನ್ನುತ್ತಾರೆ.

ಒಂದು ಕಡೆ ಹೊರ್ತಾಗಿ ಎಲ್ಲಾ ಕಡೆಯಲ್ಲಿ ನೀರುಳ್ಳ ಒಣನೆಲದ ಪ್ರದೇಶಕ್ಕೆ **ದ್ವೀಪಕಲ್ಪ**ವೆಂತಲೂ **ಅರ್ಧದ್ವೀಪ**ವೆಂತಲೂ ಅನ್ನುತ್ತಾರೆ.

ಎರಡು ಭೂಪ್ರದೇಶಗಳನ್ನು ಜೋಡಿಸುವಂಥ ಅಗಲು ಕಡಿಮೆ ಯಾದ ನೆಲಕ್ಕೆ **ಸಂಯೋಗಭೂಮಿ**ಯೆನ್ನುತ್ತಾರೆ.

ಸಮುದ್ರದೊಳಗೆ ಹೋದಂಥ ಕಿರಿಯಗಲುಳ್ಳ ಭೂಪ್ರದೇಶಕ್ಕೆ **ಭೂಶಿರ**ವೆನ್ನುತ್ತಾರೆ.

ಎತ್ತರವಾದ ನೆಲಕ್ಕೆ **ದಿನ್ನೆ** ಎನ್ನುವರು; ದಿನ್ನೆಗಳು ಬಹು ದೊಡ್ಡವಿದ್ದರೆ, ಅವುಗಳಿಗೆ **ಪರ್ವತಗಳೆಂ**ತಲೂ, **ಗುಡ್ಡಗಳೆಂ**ತಲೂ, ಬೆಟ್ಟಗಳೆಂತಲೂ ಅನ್ನುವರು. ಗುಡ್ಡಗಳು ಬುಡದಲ್ಲಿ ಒಂದಕ್ಕೊಂದು ಹೊಂದಿದ್ದರೆ, ಅವುಗಳಿಗೆಲ್ಲಕ್ಕೂ ಕೂಡಿ **ಪರ್ವತಾವಳಿ** ಎನ್ನುವರು. ಪರ್ವತಾವಳಿ ಎಂಬುವದಕ್ಕೆ ಬದಲಾಗಿ ಸಂಕ್ಷೇಪದಿಂದ ಬರೆ ಪರ್ವತವೆಂಬ ಶಬ್ದವನ್ನು ಪ್ರಯೋಗಿಸುವದುಂಟು.

ಪರ್ವತಗಳ ನಡುವಿನ ತಗ್ಗುಭೂಮಿಗೆ **ದರಿ, ಕಂದರ, ಓರೆ** ಎಂಬ ಹೆಸರುಗಳುಂಟು.

ವಿಸ್ತೀರ್ಣವಾದ ಸಮನೆಲದ ಪ್ರ[illegible]ಕ್ಕೆ **ಬೈಲೆ**ನ್ನುವರು. ಎತ್ತರವಾದ ಬೈಲಿಗೆ **ತಪ್ಪಲೆ**ನ್ನುವರು. ನೀರು ಹರಿಯುವ ಹಾಗೆ ಇಳಿಯುತ್ತಾ ಹೋಗುವ ನೆಲಕ್ಕೆ **ಇಳುಕಲೆ**ನ್ನುವರು.

## ನೀರು

ಭೂಮಿಯ ಮೇಲಿನ ಉಪ್ಪುನೀರಿನ ಸಂಚಯದಲ್ಲಿ ಐದು ದೊಡ್ಡ ಭಾಗಗಳು ಮಾಡಲ್ಪಟ್ಟವೆ. ಅವುಗಳಿಗೆ **ಮಹಾಸಾಗರಗಳೆನ್ನುವರು.**

ಮಹಾಸಾಗರಗಳಿಗಿಂತ ಸಣ್ಣದಾಗಿ ಭೂಪ್ರದೇಶಕ್ಕೆ ಹೊಂದಿದಂಥ ಜಲರಾಶಿಗೆ **ಸಮುದ್ರ**ವೆನ್ನುವರು.

ನೆಲದೊಳಗೆ ಸೇರಿದಂಥ ಕಿರಿಯಗಲುಳ್ಳ ಸಮುದ್ರಭಾಗಕ್ಕೆ **ಆಖಾತ**ವೆನ್ನುವರು.

ಆಖಾತದ ಮುಖವು ಅಗಲಾಗಿದ್ದರೆ, ಅದಕ್ಕೆ **ಉಪಸಾಗರ**ವೆನ್ನುವರು.

ಎರಡು ಸಮುದ್ರಗಳನ್ನು ಜೋಡಿಸುವಂಥ ಕಿರಿಯಗಲುಳ್ಳ ನೀರಿಗೆ **ಸಾಮುದ್ರಧುನಿ** ಎನ್ನುವರು.

ಸುತ್ತಲೂ ನೆಲವುಳ್ಳ ನೀರಿನ ಪ್ರದೇಶಕ್ಕೆ **ಸರೋವರ**ವೆನ್ನುವರು.

ಪರ್ವತದಿಂದಾಗಲಿ ಸರೋವರದಿಂದಾಗಲಿ ಹರಿಯುವ ನೀರಿನ ಪ್ರವಾಹಕ್ಕೆ **ಹೊಳೆ** ಎಂತಲೂ **ನದಿ** ಎಂತಲೂ ಅನ್ನುವರು.

ಹೊಳೆ ಹೊರಡುವ ಸ್ಥಳಕ್ಕೆ ಅದರ **ಉಗಮ**ವೆಂತಲೂ, ಸಮುದ್ರಕ್ಕೆ ಕೂಡುವ ಸ್ಥಳಕ್ಕೆ ಅದರ **ಮುಖ**ವೆಂತಲೂ ಅನ್ನುವರು.

ಸಮುದ್ರದ ನೀರು ಏರುವಾಗ ಅದಕ್ಕೆ **ಭರತ** ಅಥವಾ **ಉಕ್ಕೇರುವಿಕೆ** ಎಂತಲೂ, ಇಳಿಯುವಾಗ ಅದಕ್ಕೆ **ಇಳಿತ**ವೆಂತಲೂ ಹೆಸರುಂಟು.

### ೪ ನೆಯ ಪ್ರಕರಣ.

## ನೀರು-ನೆಲಗಳ ಮುಖ್ಯ ವಿಭಾಗಗಳು.

ಭೂಗೋಲಶಾಸ್ತ್ರಜ್ಞರು ಭೂಮಿಯ ಪೃಷ್ಠಭಾಗದಲ್ಲಿ ಪೂರ್ವಗೋಲಾರ್ಧವೆಂತಲೂ ಪಶ್ಚಿಮಗೋಲಾರ್ಧವೆಂತಲೂ ಎರಡು ಭಾಗಗಳನ್ನು ಮಾಡುತ್ತಾರೆ. ಇವೆರಡೂ ಗೋಲಾರ್ಧಗಳಲ್ಲಿ

ವಿಸ್ತಾರವಾದ ನೆಲದ ಸುತ್ತುಮುತ್ತು ನೀರು ಇರುತ್ತದೆ. ಒಂದೊಂದು ಗೋಲಾರ್ಧದೊಳಗೆ ಒಂದೊಂದು ಮಹಾದ್ವೀಪವದೆ. ಪೂರ್ವ ಗೋಲಾರ್ಧದೊಳಗಿನ ಮಹಾದ್ವೀಪದಲ್ಲಿ ಏಶಿಯ, ಯುರೋಪ ಆಫ್ರಿಕ ಎಂಬ ಮೂರು ಖಂಡಗಳುಂಟು. ಪಶ್ಚಿಮ ಗೋಲಾರ್ಧದೊಳಗಿನ ಮಹಾದ್ವೀಪದಲ್ಲಿ ಉತ್ತರ ಅಮೇರಿಕವೆಂತಲೂ, ದಕ್ಷಿಣ ಅಮೇರಿಕವೆಂತಲೂ ಎರಡು ಖಂಡಗಳುಂಟು.

ಏಶಿಯ, ಯುರೋಪ, ಆಫ್ರಿಕ ಈ ಮೂರು ಖಂಡಗಳೊಳಗಿನ ಜನರು ಪ್ರಾಚೀನಕಾಲದಿಂದ ಒಬ್ಬರನೊಬ್ಬರು ಅರಿತಿರುವರು. ಅಮೇರಿಕ ಖಂಡವನ್ನು ಕೋಲಂಬಸನೆಂಬವನು ಸನ್ ೧೪೯೨ ನೆಯ ವರುಷ ಹುಡುಕಿ ತೆಗೆದನು ಅದರ ಪೂರ್ವದಲಿ ಮೇಲಿನ ಮೂರೂ ಖಂಡಗಳೊಳಗಿನ ಜನರಿಗೆ ಆ ಖಂಡವು ಗೊತ್ತಿದ್ದಿಲ್ಲ. ಅದರಿಂದ ಅಮೇರಿಕ ಖಂಡಗಳ ಮಹಾದ್ವೀಪಕ್ಕೆ ನೂತನ ಮಹಾದ್ವೀಪವೆಂತಲೂ, ಎರಡನೆಯದಕ್ಕೆ ಪ್ರಾಚೀನ ಮಹಾದ್ವೀಪವೆಂತಲೂ ಹೆಸರುಗಳು ಕೊಡಲ್ಪಟ್ಟವೆ. ಈ ಹೊಸ, ಹಳೆ, ಮಹಾದ್ವೀಪಗಳಿಗೆ ಕ್ರಮವಾಗಿ ಪಶ್ಚಿಮ, ಪೂರ್ವ ಮಹಾದ್ವೀಪಗಳೆಂತಲೂ ಹೆಸರುಗಳುಂಟು.

ಇದಲ್ಲದೆ ಪೂರ್ವಗೋಲಾರ್ಧದಲ್ಲಿ ಆಸ್ಟ್ರೇಲಿಯ † ವೆಂಬದೊಂದು ದೊಡ್ಡ ದ್ವೀಪವದೆ. ಅದಕ್ಕೆ ೬ ನೆಯ ಖಂಡವೆಂದು ಒಮ್ಮೊಮ್ಮೆ ಅನ್ನುವರು. ಸುತ್ತುಮುತ್ತಲಿನ ನಡುಗಡ್ಡೆಗಳು ಸಹಿತವಾಗಿ ಆಸ್ಟ್ರೇಲಿಯಕ್ಕೆ ಆಸ್ಟ್ರೇಲೇಶಿಯಾ ಎಂಬ ಹೆಸರುಂಟು.

ಯುರೋಪ ಖಂಡವು ಏಶಿಯದ ಪಶ್ಚಿಮಕ್ಕಿರುತ್ತದೆ; ಆಫ್ರಿಕವು ಯುರೋಪದ ದಕ್ಷಿಣಕ್ಕಿರುತ್ತದೆ. ಯುರೋಪಕ್ಕೂ ಆಫ್ರಿಕಕ್ಕೂ ನಡುವೆ ಭೂಮಧ್ಯ § ಸಮುದ್ರವದೆ. ಅಮೇರಿಕ ಖಂಡವು ಯುರೋಪ ಆಫ್ರಿಕಗಳ ಪಶ್ಚಿಮಕ್ಕಿರುತ್ತದೆ.

---

† ಆಸ್ಟ್ರೇಲಿಯವೆಂದರೆ ದಕ್ಷಿಣದ ಭೂಮಿಯು.

§ ಭೂಮಧ್ಯಸಮುದ್ರವೆಂದರೆ ಭೂಮಿಯ ನಡುವಿನ ಅಥವಾ ಭೂಮಿಯಿಂದ ಸುತ್ತುಗಟ್ಟಿದ ಸಮುದ್ರ.

**ನೀರು:**—ಭೂಮಿಯ ಮೇಲೆ ೫ ಮಹಾಸಾಗರಗಳುಂಟು. ಅವು ಯಾವವೆಂದರೆ—೧ ಉತ್ತರಮಹಾಸಾಗರವು ಉತ್ತರಧ್ರುವದ § ಸುತ್ತುಮುತ್ತು ಇರುತ್ತದೆ. ೨ ದಕ್ಷಿಣಮಹಾಸಾಗರವು ದಕ್ಷಿಣ ಧ್ರುವದ ಸುತ್ತುಮುತ್ತು ಇರುತ್ತದೆ. ೩ ಪಾಸಿಫಿಕ ಮಹಾಸಾಗರವು ಏಶಿಯ ಅಮೇರಿಕಗಳ ನಡುವೆ ಇರುತ್ತದೆ. ೪ ಅತಲಾಂತಿಕ ಮಹಾಸಾಗರವು ಅಮೇರಿಕದ ಪೂರ್ವಕ್ಕೂ ಯುರೋಪ ಅಫ್ರಿಕಗಳ ಪಶ್ಚಿಮಕ್ಕೂ ಇರುತ್ತದೆ. ೫ ಹಿಂದೀಮಹಾಸಾಗರವು ಏಶಿಯದ ದಕ್ಷಿಣಕ್ಕೆ ಇರುತ್ತದೆ.

---

## ೨ ನೆಯ ಭಾಗ.

# ಏಶಿಯ.

**ಮೇರೆಗಳು:**—ಏಶಿಯದ ಉತ್ತರಕ್ಕೆ ಉತ್ತರಮಹಾಸಾಗರವದೆ; ಪಶ್ಚಿಮಕ್ಕೆ ಉರಲ್ ಪರ್ವತ, ಉರಾಲನದಿ, ಕಾಸ್ಪಿಯನ್ ಸಮುದ್ರ, ಕಾಕೇಶಸ್‌ಪರ್ವತ, ಕಪ್ಪುಸಮುದ್ರ, ಮಾರ್ಮೊರಾ ಸಮುದ್ರ, ಆರ್ಕಿಪೆಲಾಗೊ, ಭೂಮಧ್ಯಸಮುದ್ರ, ಸುಯೆಜಸಂಯೋಗಭೂಮಿ, ಕೆಂಪುಸಮುದ್ರ ಎಂಬವುಗಳು ಇರುತ್ತವೆ; ದಕ್ಷಿಣಕ್ಕೆ ಹಿಂದೀ ಮಹಾಸಾಗರವುಂಟು; ಪೂರ್ವಕ್ಕೆ ಪಾಸಿಫಿಕ ಮಹಾಸಾಗರವದೆ. ಜನಸಂಖ್ಯೆಯ ಮಾನದಿಂದ ನೋಡಲಾಗಿ ಏಶಿಯ ಖಂಡವು ಯಾವತ್ತು ಖಂಡಗಳಲ್ಲಿ ದೊಡ್ಡದಿರುತ್ತದೆ. ‡

---

§ ಭೂಮಿಯು ಪಶ್ಚಿಮದಿಂದ ಪೂರ್ವಕ್ಕೆ ತನ್ನ ಮೈಸುತ್ತು ತಿರುಗುವಾಗ ಯಾವ ಕಲ್ಪಿತ ರೇಖೆಯ ಸುತ್ತುಮುತ್ತು ತಿರುಗುತ್ತದೋ ಅದಕ್ಕೆ ಭೂಮಿಯ ಗರ್ಭಸೂತ್ರವೆಂಬ ಹೆಸರುಂಟು. ಅದರ ಎರಡು ತುದಿಗಳಿಗೆ ಧ್ರುವಗಳೆನ್ನುವರು. ಉತ್ತರದ ತುದಿಯು ಉತ್ತರಧ್ರುವವು. ದಕ್ಷಿಣದ ತುದಿಯು ದಕ್ಷಿಣಧ್ರುವವು.

‡ ಬೇರೆ ಬೇರೆ ಖಂಡಗಳ ಕ್ಷೇತ್ರಫಲ ಜನಸಂಖ್ಯೆಗಳನ್ನು ಮುಂದಿನ ಪುಟದಲ್ಲಿ ನೋಡು.

ಏಶಿಯಾ ಯುರೋಪ ಖಂಡಗಳು ಒಂದಕೊಂದು ಹೊಂದಿರುತ್ತವೆ. ಏಶಿಯ ಅಫ್ರಿಕಗಳನ್ನು ಸುಯೆಜದ ಸಂಯೋಗಭೂಮಿಯು ಜೋಡಿಸುತ್ತದೆ. ಈ ಸಂಯೋಗಭೂಮಿಯಲ್ಲಿ ದೊಡ್ಡದೊಂದು ಕಾಲಿವೆಯನ್ನು ಅಗಿದು, ಕೆಂಪುಸಮುದ್ರವನ್ನು ಭೂಮಧ್ಯಸಮುದ್ರಕ್ಕೆ ಕೂಡಿಸಿದ್ದಾರೆ. ಈ ಕಾಲಿವೆಯೊಳಗಿಂದ ಸನ್ ೧೮೬೯ ನೆಯ ವರುಷದಿಂದ ಹಡಗುಗಳು ನಡೆಯುತ್ತವೆ. ಏಶಿಯ ಅಮೇರಿಕಗಳ ನಡುವೆ ಬೆಹರಿಂಗ ಸಾಮುದ್ರಧುನಿಯುಂಟು.

**ಏಶಿಯದೊಳಗಿನ ದೇಶಗಳು:**—೧. ಬಲೂಚಿಸ್ತಾನ ೨. ಅಫಗಾಣಿಸ್ತಾನ, ೩. ಇರಾಣ, ೪. ಅರಬಸ್ತಾನ, ೫. ತುರ್ಕೀದೇಶ, ೬. ತುರ್ಕಸ್ತಾನ, ೭. ರಶಿಯದ ರಾಜ್ಯ, ೮. ಜಪಾನ, ೯. ಚೀನೀರಾಜ್ಯ, ೧೦. ಇಂಡಿಯನ್ ಚಾಯನಾ (ಪೂರ್ವ ದ್ವೀಪಕಲ್ಪ), ೧೧. ಸಿಂಹಳದ್ವೀಪ ೧೨. ಹಿಂದುಸ್ಥಾನ.

**ಸಮುದ್ರಗಳು:**—೧. ಕೆಂಪುಸಮುದ್ರವು, ಅರಬಸ್ತಾನ ಅಫ್ರಿಕಗಳ ನಡುವೆ; ೨. ಅರಬೀಸಮುದ್ರವು, ಅರಬಸ್ತಾನಕ್ಕೂ ಹಿಂದುಸ್ತಾನಕ್ಕೂ ನಡುವೆ; ೩. ಬಂಗಾಲದ ಸಮುದ್ರವು, ಹಿಂದುಸ್ತಾನಕ್ಕೂ ಇಂಡಿಯನ್ ಚಾಯನಾಕ್ಕೂ ನಡುವೆ; ೪. ಚಿನಯಿ ಸಮುದ್ರವು, ಚೀನದ ದಕ್ಷಿಣಕ್ಕೆ; ೫. ಪೀತಸಮುದ್ರವು, ಚೀನಕ್ಕೂ ಕೋರಿಯಕ್ಕೂ ನಡುವೆ; ೬. ಜಪಾನದ ಸಮುದ್ರವು, ಜಪಾನಕ್ಕೂ ಚೀನೀ ರಾಜ್ಯಕ್ಕೂ ನಡುವೆ; ೭. ಒಖಾಟಸ್ಕದ ಸಮುದ್ರವು, ಸೈಬೇರಿಯಕ್ಕೂ ಕಾಮಶ್ಚಾಟಕಾಕ್ಕೂ ನಡುವೆ ಇರುತ್ತವೆ.

| ಖಂಡಗಳು. | ಕ್ಷೇ. ಫಲ ಚ. ಮೈಲು | ಜನಸಂಖ್ಯೆ. | ಒಂದು ಚ. ಮೈಲಿಗೆ. ಜನರು ಸುಮಾರು |
|---|---|---|---|
| ಏಶಿಯಾ | ...೧,೬೦,೦೦,೦೦೦ | ... ೮೬,೦೦,೦೦,೦೦೦ | ... ೪೬ |
| ಯುರೋಪ | ... ೩೮,೦೦,೦೦೦ | ... ೩೯,೯೦,೦೦,೦೦೦ | ... ೧೦೮ |
| ಅಫ್ರಿಕಾ | ...೧,೨೦,೦೦,೦೦೦ | ... ೨೦,೦೦,೦೦,೦೦೦ | ... ೧೬ |
| ಅಮೇರಿಕ | ...೧,೬೦,೦೦,೦೦೦ | ... ೧೪,೦೦,೦೦,೦೦೦ | ... ೯ |
| ಓಸಿಯಾನಿಯಾ | ...೪೨,೦೦,೦೦೦ | ... ೪,೦೦,೦೦,೦೦೦ | ... ೯ |
| ಒಟ್ಟು | ...೫,೨೦,೦೦,೦೦೦ | ...೧,೬೩,೯೦,೦೦,೦೦೦ | —೩೧,೫ |

ಇವುಗಳಲ್ಲದೆ ಸಣ್ಣ ಸಣ್ಣ ಸಮುದ್ರಗಳೂ ಉಪಸಾಗರಗಳೂ ಸಾಮುದ್ರಧುನಿಗಳೂ ಅಸಂಖ್ಯವುಂಟು. ಅವು ಯಾವ ಯಾವ ದೇಶಕ್ಕೆ ಹೊಂದಿರುತ್ತವೆಯೋ ಆಯಾ ದೇಶದ ಸಂಗಡ ವಿವರಿಸಲ್ಪಡುವವು.

## ೧. ಬಲೂಚಿಸ್ತಾನವು.

ಈ ಗುಡ್ಡಗಾಡು ಸೀಮೆಯು ಸಿಂಧಪ್ರಾಂತದ ಪಶ್ಚಿಮಕ್ಕಿರುತ್ತದೆ. ಈ ದೇಶಕ್ಕೂ ಸಿಂಧಪ್ರಾಂತಕ್ಕೂ ನಡುವೆ ಹಾಲಾ ಎಂಬ ಪರ್ವತವುಂಟು.

ಈ ದೇಶದಲ್ಲಿ ಮುಸಲ್ಮಾನರು ಇರುತ್ತಾರೆ. ಅವರು ಕಾಡು ಜನರು, ಒಕ್ಕಲತನವನ್ನು ಚನ್ನಾಗಿ ನಡಿಸುವದಿಲ್ಲ. ಕುರಿಗಳನ್ನೂ ದನಗಳನ್ನೂ ಸಾಕುತ್ತಾರೆ. **ಬೋಲನ್** ಎಂಬ ಘಟ್ಟದ ಮಾರ್ಗದಿಂದ ಬಲುಚೀ ಜನರು ಹಿಂದುಸ್ತಾನಕ್ಕೆ ಬಂದು, ಉಣ್ಣೆ, ಚರ್ಮ ಮುಂತಾದ ಜಿನಸುಗಳನ್ನ ಮಾರಿ ಅವುಗಳಿಗೆ ಬದಲಾಗಿ ಬೇರೆ ಪದಾರ್ಥಗಳನ್ನು ತಕ್ಕೊಂಡು ಹೋಗುತ್ತಾರೆ. ಈ ದೇಶದ ಪೂರ್ವಭಾಗವು ಇ.ಸ. ೧೮೮೭ ರಿಂದ ಬ್ರಿಟಿಶ್ ಸರಕಾರದವರ ವಶದಲ್ಲಿದ್ದು ಬ್ರಿಟಿಶ್ ಬಲುಚಿಸ್ತಾನವೆಂಬ ಹೆಸರಿನಿಂದ ಬ್ರಿಟಿಶ್ ಹಿಂದುಸ್ತಾನದ ಒಂದು ಭಾಗವಾಗಿದೆ. ಅದರಲ್ಲಿ **ಕ್ವೇಟಾ, ಸಿಬಿ, ಪಿಶಿನ್. ಬೋಲನ್** ಎಂಬ ಪ್ರಾಂತಗಳಿವೆ. ಮುಖ್ಯ ಪಟ್ಟಣವು **ಕ್ವೇಟಾ.**

ಉಳಿದ ಭಾಗದಲ್ಲಿ ಬೇರೆ ಬೇರೆ ಬಣಗಳು ವಾಸಿಸುತ್ತಿದ್ದು, ಅವುಗಳ ರಾಜ್ಯದಾಡಳಿತೆಯು ಬ್ರಿಟಿಶ್ ಸರಕಾರದ ಮೇಲಧಿಕಾರಕ್ಕೆ ಒಳಗಾಗಿದೆ. ಆದರೆ ಈ ಭಾಗದಲ್ಲಿ **ಖಿಲಾತದ** ಖಾನನ ರಾಜ್ಯವು **ಲಾಸಬೆಲಾದ** ಜಾಮನ ರಾಜ್ಯವೂ ಎಲ್ಲಕ್ಕೂ ದೊಡ್ಡವು. ಇವರಿಬ್ಬರೂ ಬ್ರಿಟಿಶ್‌ಸರಕಾರದ ರಕ್ಷಣೆಗೆ ಒಳಗಾಗಿದ್ದಾರೆ. ಅವರ ಸೀಮೆಗಳು ಹಾಳು ಪ್ರದೇಶಗಳಾಗಿವೆ. **ಖಿಲಾತ** ಪಟ್ಟಣಕ್ಕೆ ಕೋಟೆಯುಂಟು.

## ೨ ಅಫಗಾಣಿಸ್ತಾನವು.

ಈ ದೇಶವು ಬಲುಚಿಸ್ತಾನದ ಉತ್ತರಕ್ಕೆ ಪಂಜಾಬದ ವಾಯುವ್ಯದಲ್ಲಿ ಇರುತ್ತದೆ. ಇದರ ಉತ್ತರದಲ್ಲಿ ಹಿಂದುಕುಶಪರ್ವತವೂ, ಅದರಾಚೆ ತುರ್ಕಸ್ತಾನವೂ ಉಂಟು, ಈ ದೇಶಕ್ಕೂ ಪಂಜಾಬಕ್ಕೂ ನಡುವೆ ಸುಲೈಮಾನವೆಂಬ ಪರ್ವತವಿರುತ್ತದೆ. ಈ ದೇಶದಲ್ಲಿ ಕೆಲವು ಬೆಳೆಯುಳ್ಳ ಕಂದರಗಳಿರುತ್ತವೆ. ಆದರೆ ಸಾಧಾರಣವಾಗಿ ಗುಡ್ಡಗಳು ಬಹಳ, ಭೂಮಿಯು ಉತ್ತರಕ್ಕೆ ಏರುತ್ತ ಹೋಗುತ್ತದೆ. ಕಾಬೂಲೆಂಬ ಹೊಳೆಯು ಈ ದೇಶದೊಳಗಿಂದ ಹರಿದು ಬಂದು ಸಿಂಧುನದಕ್ಕೆ ಕೂಡುತ್ತದೆ.

ಈ ದೇಶದಲ್ಲಿ ಮುಸಲ್ಮಾನರು ವಾಸಿಸುತ್ತಾರೆ. ಅವರು ಉದ್ಧಟಸ್ವಭಾವದವರು; ಪುಸ್ತೋ ಎಂಬ ಪಠಾಣೀ ಭಾಷೆಯನ್ನು ಆಡುತ್ತಾರೆ. ಅವರು ಪಂಜಾಬ, ತುರ್ಕಸ್ತಾನ, ಇರಾಣ ಈ ಮೂರು ದೇಶಗಳಿಗೆ ಹೋಗಿ ವ್ಯಾಪಾರ ನಡಿಸುವರು; ಕುದುರೆಗಳನ್ನೂ ಒಣಗಿದ ಫಲಗಳನ್ನೂ ಪರದೇಶಗಳಿಗೆ ಕಳಿಸಿ, ಅವುಗಳ ಬದಲು ನೂಲಿನ ಬಟ್ಟೆ ಮುಂತಾದ ಪದಾರ್ಥಗಳನ್ನು ತರಿಸುತ್ತಾರೆ. ಅವರು ಖೈಬರ ಎಂಬ ಘಟ್ಟದ ಮಾರ್ಗದಿಂದ ಪಂಜಾಬಕ್ಕೆ ಬರುತ್ತಾರೆ.

ಈ ದೇಶದ ಒಡೆಯನಿಗೆ ಅಮೀರನೆನ್ನುವರು; ಅವನು ಕಾಬೂಲ ಪಟ್ಟಣದಲ್ಲಿರುತ್ತಾನೆ. ಆ ಪಟ್ಟಣವು ಕಾಬೂಲೆಂಬ ಹೊಳೆಯ ದಡದಲ್ಲಿರುತ್ತದೆ. ೬ ಕಂದಹಾರ, ಗಿಝನಿ ಎಂಬ ಪಟ್ಟಣಗಳಿಗೆ ಬಲವಾದ ಕೋಟೆಗಳುಂಟು. ಉತ್ತರಭಾಗದಲ್ಲಿ ಬಲ್‌ಕ ಎಂಬ ಪಟ್ಟಣವದೆ; ಇದು ಪೂರ್ವಕಾಲದಲ್ಲಿ ವ್ಯಾಪಾರದಲ್ಲಿ ಹೆಸರಾಗಿತ್ತು. ಪಶ್ಚಿಮ-ಭಾಗದಲ್ಲಿ ಹಿರಾತೆಂಬ ಪಟ್ಟಣವದೆ.

---

೬ ಇಲ್ಲಿ ಅಫಗಾಣರು ೧೮೪೨ ರಲ್ಲಿ ಇಂಗ್ಲಿಷರ ದಳವಾಯಿಗಳಾದ ಮೇಕ್ನಾಗ್ಟನ್, ಅಲ್ಲೆಗಾಂಡರ ಬರ್ನ್ಸ ದೊರೆಗಳನ್ನೂ, ೧೮೭೯ ರಲ್ಲಿ ಕೆವಗ್ನಾರಿ ದೊರೆಯನ್ನೂ ಮೋಸದಿಂದ ಕೊಂದರು.

## ೩ ಇರಾಣ.

ಇದು ಮುಸಲ್ಮಾನರ ಮೂರನೆಯ ದೇಶವು. ಇದು ಅಫಗಾಣಿಸ್ತಾನ-ಬಲುಚಿಸ್ತಾನಗಳ ಪಶ್ಚಿಮಕ್ಕಿರುತ್ತದೆ. ಇರಾಣದ ಉತ್ತರದಲ್ಲಿ ಪಾರೋಪಾಮಿಸಸ್ ಎಂಬ ಎತ್ತರವಾದ ಪರ್ವತಾವಳಿಯೂ, ಕಾಸ್ಪಿಯನ್ ಸಮುದ್ರದ * ಧಡದಲ್ಲಿ ಎಲ್ಬುರ್ಜ ಎಂಬ ಪರ್ವತಾವಳಿಯೂ ಉಂಟು. ಇದರ ದಕ್ಷಿಣಕ್ಕೆ ಇರಾಣೀ ಆಖಾತವದೆ. ಬಹುತರ ಈ ದೇಶದ ಪಶ್ಚಿಮಭಾಗವೆಲ್ಲವೂ ಕಾಸ್ಪಿಯನ್‌ಸಮುದ್ರದ ದಂಡೆಯಲ್ಲಿ ಕೆಲವು ಪ್ರದೇಶಗಳೂ ಬೆಳೆಯುಳ್ಳವುಗಳಿರುತ್ತವೆ. ಆದರೆ ಪೂರ್ವಭಾಗವು ಒಕ್ಕಲಿಲ್ಲದ್ದು. ಇರಾಣೀ ಆಖಾತವು ಅರಬಸ್ತಾನಕ್ಕೂ ಇರಾಣಕ್ಕೂ ನಡುವೆ ಇರುತ್ತದೆ. ಈ ಆಖಾತದಲ್ಲಿ ಮೂರು ಪ್ರಸಿದ್ಧವಾದ ನಡುಗಡ್ಡೆಗಳುಂಟು. ಅವುಗಳಲ್ಲಿ ಕರಕ ಎಂಬ ನಡುಗಡ್ಡೆಯು ಇರಾಣದ ಶಹನ ವಶದಲ್ಲುಂಟು. ಈ ದ್ವೀಪಗಳ ಹತ್ತರ ಸಮುದ್ರದೊಳಗೆ ಮುತ್ತುಗಳು ದೊರೆಯುತ್ತವೆ. ಉಳಿದ ಎರಡು ಕಿಶ್ಮ, ಆರ್ಮುಝ್ ಎಂಬ ನಡುಗಡ್ಡೆಗಳು ಮಸ್ಕತ್ತದ ಇಮಾಮನ ವಶದಲ್ಲಿ ಇರುತ್ತವೆ. ಅವುಗಳಲ್ಲಿ ಆರ್ಮುಝ್ ಎಂಬ ನಡುಗಡ್ಡೆಯು ಇರಾಣೀ ಆಖಾತದ ಮುಖದಲ್ಲಿ ಅದಕ್ಕೂ ಓಮಾನೆಂಬ ಆಖಾತಕ್ಕೂ ನಡುವೆ ಇರುತ್ತದೆ. ಪೊರ್ತುಗೀಜರು ಈ ದ್ವೀಪಕ್ಕೆ ಕೋಟೆಯನ್ನು ಕಟ್ಟಿದ್ದಾರೆ. ಅವರ ಕೈಯಲ್ಲಿ ಈ ದ್ವೀಪವಿದ್ದಾಗ ಇದರಲ್ಲಿ ವ್ಯಾಪಾರವು ಬಹಳ ನಡೆಯುತ್ತಿತ್ತು.

ಇಲ್ಲಿಯ ಅರಸನಿಗೆ ಶಹನೆಂದೆನ್ನುವರು. ಅವನ ರಾಜಧಾನಿ ತೆಹರಾನ ಪಟ್ಟಣವು. ಇವನು ಬಹುಕಾಲ ಪೂರ್ಣವಾಗಿ ಸ್ವತಂತ್ರತೆಯಿಂದ ಆಳುತ್ತಿದ್ದನು. ಆದರೆ ಇ. ಸ. ೧೯೦೮ರಲ್ಲಿ

---

* ಇದು ಪೃಥ್ವಿಯಲ್ಲಿ ಎಲ್ಲಕ್ಕೂ ದೊಡ್ಡ ಸರೋವರವು. ಇದರ ಕ್ಷೇತ್ರ ಫಲವು ೧,೫೦,೦೦೦ ಚಚ್ಚೌಕು ಮೈಲು. ಇದಕ್ಕೆ ಸಮುದ್ರವೆಂದು ಹೆಸರಿದ್ದರೂ ಇದು ಯಾವ ಸಮುದ್ರಕ್ಕೂ ಕೂಡುವದಿಲ್ಲ. ಇದು ರೂಸದೇಶದ ಬಾದಶಹನ ವಶದಲ್ಲಿರುತ್ತದೆ. ಇದರ ನೀರು ತುಸು ಉಪ್ಪು.

ಪ್ರಜೆಗಳು ಅರಸನ ಕೂಡ ಬಡಿದಾಟ ಹೂಡಿ ಕಡೆಗೆ ಅವನಿಂದ ಕೆಲವು ಅಧಿಕಾರಗಳನ್ನು ಪಡೆದಿರುವರು. ಇಸ್ಪಹಾನೆಂಬುವದೊಂದು ಹಳೇ ರಾಜಧಾನಿಯುಂಟು. ಶಿರಾಜ ಪಟ್ಟಣವು ಬಹು ಪುರಾತನ ಕಾಲದಲ್ಲಿ ಈ ದೇಶದ ರಾಜಧಾನಿಯಾಗಿತ್ತು. ಇಲ್ಲಿ ಮೇಲಾದ ಮದ್ಯವು ಹುಟ್ಟುತ್ತದೆ. ಸಾದಿ, ಹಾಫೀಜ ಎಂಬಿಬ್ಬರು ಹೆಸರಾದ ಕವಿಗಳು ಇದೇ ಪಟ್ಟಣದಲ್ಲಿ ಹುಟ್ಟಿದರು. ಎಜ್ದ ಎಂಬದೊಂದು ದೊಡ್ಡ ಪಟ್ಟಣವುಂಟು. ಅಲ್ಲಿ ಝೋರೋಸ್ತ್ರರನ ಧರ್ಮದವರಾದ ಪಾರ್ಸಿ ಜನರು ವಾಸಿಸುತ್ತಾರೆ. ಉತ್ತರದಲ್ಲಿ ತಾಬ್ರಿಜ ಪಟ್ಟಣವಿರುತ್ತದೆ. ಅಲ್ಲಿಯವರು ರಶಿಯ, ತುರ್ಕಿ ಇವೆರಡು ದೇಶಗಳ ಸಂಗಡ ಬಹಳ ವ್ಯಾಪಾರ ನಡಿಸುತ್ತಾರೆ. ಕಾಸ್ಪಿಯನ್ ಸಮುದ್ರದ ದಂಡೆಯಲ್ಲಿರುವ ಅಸ್ತ್ರಾಬಾದ ಮುಂತಾದ ಪಟ್ಟಣಗಳ ನಿವಾಸಿಗಳು ರಶಿಯದವರ ಸಂಗಡ ವ್ಯಾಪಾರ ನಡಿಸುತ್ತಾರೆ. ಪೂರ್ವಭಾಗದಲ್ಲಿ ಮಶದ ಎಂಬ ಪಟ್ಟಣವದೆ. ಅಲ್ಲಿಯವರು ತುರ್ಕಸ್ತಾನದ ಸಂಗಡಲೂ ಹಿರಾತದ ಸಂಗಡಲೂ ವ್ಯಾಪಾರ ಮಾಡುತ್ತಾರೆ. ಇರಾಣೀ ಆಖಾತದ ದಂಡೆಯಲ್ಲಿರುವ ಬುಶಾಯರ ಎಂಬ ಪಟ್ಟಣದ ನಿವಾಸಿಗಳು ಹಿಂದುಸ್ತಾನದ ಸಂಗಡ ವ್ಯಾಪಾರ ಮಾಡುತ್ತಾರೆ.

ಈ ದೇಶದ ಕುದುರೆಗಳೂ ನಾಯಿಗಳೂ ಬಹಳ ಪ್ರಸಿದ್ಧ ಉಂಟು. ಈ ದೇಶದಿಂದ ಫಲಗಳು, ಅರಳೆ-ಉಣ್ಣೆ-ರೇಶಿಮೆಗಳ ವಸ್ತ್ರಗಳು, ಚರ್ಮ, ಆಭರಣಗಳು, ಸುಗಂಧದ ಎಣ್ಣೆಗಳು, ಕೇಶರ, ಚೂರಿಗಳು, ಕಾಜು, ಶಸ್ತ್ರಗಳು, ಮಣ್ಣಿನ ಪಾತ್ರೆಗಳು ಮುಂತಾದ ಪದಾರ್ಥಗಳು ಪರದೇಶಗಳಿಗೆ ಹೋಗುತ್ತವೆ. ಈ ದೇಶದಲ್ಲಿ ಹಲವು ಬಗೆಯ ಉಪಯುಕ್ತವಾದ ಲೋಹಗಳೂ ಮೇಲಾದ ಬಿಳಿಕಲ್ಲುಗಳೂ ದೊರೆಯುತ್ತವೆ. ಹಿಂದುಸ್ತಾನದಿಂದ ಈ ದೇಶಕ್ಕೆ ನೀಲಿ, ತಂಬಾಕ, ಸಕ್ಕರೆ ಅಲಂಕಾರಗಳು, ಯುರೋಪದಿಂದ ಬಂದ ವಸ್ತ್ರ ಮುಂತಾದವುಗಳು ಹೋಗುತ್ತವೆ.

## ೪. ಅರಬಸ್ತಾನವು.

ಈ ದೊಡ್ಡ ದ್ವೀಪಕಲ್ಪವು ಇರಾಣದ ಪಶ್ಚಿಮಕ್ಕಿರುತ್ತದೆ. ಅರಬಸ್ತಾನಕ್ಕೂ ಆಫ್ರಿಕಕ್ಕೂ ನಡುವೆ ಕೆಂಪುಸಮುದ್ರವುಂಟು. ಬಾಬೆಲಮಾಂಡೆಬ ಎಂಬ ಸಾಮುದ್ರಧುನಿಯು ಕೆಂಪುಸಮುದ್ರವನ್ನು ಹಿಂದೀ ಮಹಾಸಾಗರಕ್ಕೆ ಜೋಡಿಸುತ್ತದೆ. ರಾಸ್ ಅಲ್ ಹದ್ ಎಂಬ ಭೂಶಿರವು ಅರಬಸ್ತಾನದ ಆಗ್ನೇಯಕ್ಕಿರುತ್ತದೆ. ಇರಾಣೀ ಆಖಾತದೊಳಗಿರುವ ಬೆಹೇರಿನ್ ಎಂಬ ನಡುಗಡ್ಡೆಯು ಅರಬಸ್ತಾನದವರ ವಶದಲ್ಲುಂಟು. ಅಲ್ಲಿ ಮುತ್ತು ಬಹಳ ದೊರೆಯುತ್ತವೆ.

ಅರಬಸ್ತಾನದ ದಕ್ಷಿಣ-ಪಶ್ಚಿಮ ದಂಡೆಗಳಲ್ಲಿ ದೊಡ್ಡ ಪರ್ವತಾವಳಿಗಳುಂಟು. ಅವುಗಳ ಇಳುಕಲಿನ ಭೂಮಿಯು ಬೆಳೆಯುಳ್ಳದ್ದುಂಟು. ಆದರೆ ಈ ದೇಶದ ಮಧ್ಯ ಪ್ರದೇಶದಲ್ಲಿ ಬಹುತರ ಯಾವತ್ತು ಉಸುಬಿನ ಬೈಲುಂಟು. ಕೆಲಕೆಲವು ಕಡೆಯಲ್ಲಿ ನೀರಿದ್ದಲ್ಲಿ ಮಾತ್ರ ಜನರು ವಾಸಿಸುತ್ತಾರೆ.

ಅರಬಸ್ತಾನದ ಪಶ್ಚಿಮಭಾಗವೆಲ್ಲ ಯುರೋಪದೊಳಗಿನ ತುರ್ಕಿದೇಶದ ಸುಲ್ತಾನನ ರಾಜ್ಯಕ್ಕೆ ಸೇರಿರುತ್ತದೆ. ಅದರಲ್ಲಿ ಹೆದಜಝ್, ಯೆಮೆನ್ ಎಂಬ ಪ್ರಾಂತಗಳಿವೆ. ಅವುಗಳಲ್ಲಿ ಹೆಸರಾದ ಪಟ್ಟಣಗಳು ಹಲವುಂಟು. ಹೆದಜಝ ಪ್ರಾಂತದಲ್ಲಿ ಮುಸಲ್ಮಾನರ **ಮಕ್ಕಾ** ಎಂಬ ಬಹು ವಿಖ್ಯಾತವಾದ ಪಟ್ಟಣವದೆ. ಅಲ್ಲಿ ಮುಸಲ್ಮಾನ ಧರ್ಮವನ್ನು ಸ್ಥಾಪಿಸಿದವನಾದ **ಮುಹಮ್ಮದನು** ಹುಟ್ಟಿದನು. ಆ ಪಟ್ಟಣದ ಹತ್ತರ ಕೆಂಪುಸಮುದ್ರದ ದಂಡೆಯಮೇಲೆ **ಜಿದ್ದಾ** ಎಂಬ ಬಂದರವದೆ. ಮಕ್ಕಾ ಪಟ್ಟಣದ ಉತ್ತರದಲ್ಲಿರುವ **ಮದೀನಾ** ಪಟ್ಟಣದಲ್ಲಿ ಮುಹಮ್ಮದನ ಗೋರಿಯುಂಟು. ಯೆಮೆನ್ ಪ್ರಾಂತದಲ್ಲಿ **ಮೋಖಾ** ಎಂಬದೊಂದು ದುರ್ಗ ಕೋಟೆಯುಳ್ಳ ಬಂದರವದೆ. ಅಲ್ಲಿಂದ ಮೇಲಾದ ಬುಂದು ಪರದೇಶಕ್ಕೆ ಹೋಗುತ್ತದೆ. ದಕ್ಷಿಣದಲ್ಲಿ ಹೆದ್ರಾಮೌತ ಪ್ರಾಂತದೊಳಗೆ ಇಂಗ್ಲಿಷರ ವಶದಲ್ಲಿ ಕೆಲವು ಪ್ರದೇಶವುಂಟು. ಅದರಲ್ಲಿ **ಏದನ್** ಎಂಬದೊಂದು ಬಹು ಪ್ರಸಿದ್ಧವಾದ ಬಂದರವದೆ. ಹಿಂದುಸ್ತಾನದ

ಪ್ರವಾಸಿಗಳು ಇಲ್ಲಿಗೆ ಬಂದು ಮುಂದೆ ಕೆಂಪುಸಮುದ್ರ-ಭೂಮಧ್ಯ ಸಮುದ್ರಗಳ ಮಾರ್ಗವಾಗಿ ಯುರೋಪಖಂಡದ ಬೇಕಾದ ದೇಶಕ್ಕೆ ಹೋಗುತ್ತಾರೆ. ಅರಬಸ್ತಾನದ ಪೂರ್ವಭಾಗದಲ್ಲಿ ಒಮಾನ ಎಂಬ ಪ್ರಾಂತವು ಮಸ್ಕತ್ತದ ಇಮಾಮನ ವಶದಲ್ಲಿರುತ್ತದೆ. ಮಸ್ಕತ್ತ ಪಟ್ಟಣಕ್ಕೆ ಭದ್ರವಾದ ಕೋಟೆಯುಂಟು. ಇರಾಣದ ದಂಡೆಯಲ್ಲಿ ಕೆಲವು ಪ್ರದೇಶವು ಈ ಇಮಾಮನ ವಶದಲ್ಲಿ ಇರುತ್ತದೆ. ಅರಬಸ್ತಾನದ ಮಧ್ಯದಲ್ಲಿರುವ ತಪ್ಪಲ ಸೀಮೆಯು ಇನ್ನೊಂದು ಹೇಳತಕ್ಕಂಥ ಪ್ರದೇಶವಿರುತ್ತದೆ. ಇದರಲ್ಲಿ ನೀರು ಸಮೃದ್ಧಿಯಾಗಿರುವದು; ಬೆಳೆ ಚನ್ನಾಗಿ ಬರುತ್ತದೆ. ಈ ಪ್ರಾಂತಕ್ಕೆ ನಜ್‌ದ ಎಂಬ ಹೆಸರುಂಟು. ಇಲ್ಲಿಯ ಮುಖ್ಯ ಪಟ್ಟಣವು ರಿಯಾದೆಂಬುವದುಂಟು. ಈ ಪ್ರಾಂತದ ಅರಸನ ಬಳಿಯಲ್ಲಿ ಮೇಲಾದ ಕುದುರೆಗಳಿರುತ್ತವೆಂದು ಖ್ಯಾತಿಯುಂಟು.

ಅರಬಸ್ತಾನದ ಕುದುರೆಗಳೂ ಒಂಟೆಗಳೂ ಬಹು ಪ್ರಸಿದ್ಧ. ಆದರೆ ಈ ದೇಶದ ಜನರು ಅಶಿಕ್ಷಿತರೂ ಉದ್ಧಟರೂ ಇರುತ್ತಾರೆ. ಇವರು ತಂಡತಂಡಾಗಿ ತಿರುಗುತ್ತ ವ್ಯಾಪಾರಸ್ಥರನ್ನು ಸುಲಕೊಂಡು ಜೀವಿಸುವರು. ಈ ದೇಶದಿಂದ ಅಂಟು, ಕುದುರೆಗಳು, ಬುಂದು ಮುಂತಾದವುಗಳು ಪರದೇಶಗಳಿಗೆ ಹೋಗುತ್ತವೆ.

## ೫. ತುರ್ಕೀ ದೇಶವು.

ಈ ದೇಶವು ಯುರೋಪದೊಳಗಿನ ತುರ್ಕೀದೇಶದ ಸುಲ್ತಾನನ ವಶದಲ್ಲಿರುತ್ತದೆ. ಇದು ಅರಬಸ್ತಾನದ ಉತ್ತರದಲ್ಲಿರುತ್ತದೆ. ಇದರಲ್ಲಿ ಏಶಿಯಾಮೈನರ, ಸಿರಿಯಾ, ಮುಂತಾದ ನಾಲ್ಕು ಭಾಗಗಳುಂಟು.

೧. **ಏಶಿಯಾಮೈನರ:**—ವಾಯವ್ಯದಿಕ್ಕಿಗಿರುವ ಈ ದ್ವೀಪಕಲ್ಪವು ಭೂಮಧ್ಯ ಸಮುದ್ರಕ್ಕೂ ಕಪ್ಪುಸಮುದ್ರಕ್ಕೂ ನಡುವೆ ಇರುತ್ತದೆ. ಇದರಲ್ಲಿ ಗುಡ್ಡಗಳು ಬಹಳ. ಇದರಲ್ಲಿ ಸ್ಮರ್ನಾ ಎಂಬ ಪಟ್ಟಣವು ತುರ್ಕಿಯ ರಾಜಧಾನಿಯೂ ಯುರೋಪದವರ ವ್ಯಾಪಾರಸ್ಥಳವೂ ಇರುತ್ತದೆ. ಈ ಪ್ರಾಂತದಲ್ಲಿ ಎಲ್ಲ ವಿಧದ

ವಸ್ತ್ರಗಳು ಹುಟ್ಟುತ್ತವೆ. ಇಲ್ಲಿ ಹುಟ್ಟುವ ಅಂಗೋರಾ ಎಂಬ ಜಾತಿಯ ಕುರಿಗಳ ಉಣ್ಣೆಯಿಂದ ಮೇಲಾದ ಶಾಲುಗಳು ಆಗುತ್ತವೆ. ಈ ಪ್ರಾಂತದ ಕಣಿಗಳಲ್ಲಿ ದೊರೆಯುವ ತಾಮ್ರ ಲೋಹಚುಂಬಕಗಳು ಬಹಳ ಪ್ರಸಿದ್ಧವುಂಟು. ಇಲ್ಲಿಂದ ಅಫೂ, ಧಾನ್ಯಗಳು, ಫಲಗಳು, ಮದ್ಯ ಮುಂತಾದವುಗಳು ಪರದೇಶಗಳಿಗೆ ಹೋಗುತ್ತವೆ.

ಈ ಪ್ರಾಂತದ ನೆರೆಯಲ್ಲಿ ಹಲವು ನಡುಗಡ್ಡೆಗಳಿರುತ್ತವೆ. ಅವುಗಳಲ್ಲಿ ಪಶ್ಚಿಮ ದಂಡೆಗೆ ಹೊಂದಿರುವ ಲೆಸ್‌ಬಾಸ, ಸೆಮಾಸ, ಕೋಸ, ಹ್ರೋಡ್‌ಸ ಎಂಬ ನಡುಗಡ್ಡೆಗಳೂ, ದಕ್ಷಿಣ ದಂಡೆಯು ಹತ್ತರ ಇರುವ ಸೈಪ್ರಸ ಎಂಬ ದ್ವೀಪವೂ ಪೂರ್ವದ ಗ್ರೀಕ ಜನರ ಕಾಲಕ್ಕೆ ಬಹಳ ಹೆಸರಾಗಿದ್ದವು. ಸೈಪ್ರಸ ದ್ವೀಪವು ಈಗ ಇಂಗ್ಲಿಷರ ವಶದಲ್ಲಿರುತ್ತದೆ. ಈ ಪ್ರಾಂತದಲ್ಲಿ ತಾರಸ ಪರ್ವತವದೆ.

**ಸಿರಿಯಾ:**—ಈ ಪ್ರಾಂತವು ಏಶಿಯಾಮೈನರದ ದಕ್ಷಿಣಕ್ಕಿರುತ್ತದೆ. ಇದರ ಪಶ್ಚಿಮ ಭಾಗದಲ್ಲಿ ಇರುವ ಲೆಬನನ್ನೆಂಬ ಪರ್ವತವು ತಾರಸ ಪರ್ವತದಿಂದ ಅರಬಸ್ತಾನದ ವರೆಗೆ ಹೋಗಿರುತ್ತದೆ. ಈ ಪ್ರಾಂತದ ಪೂರ್ವಭಾಗವು ಹಾಳು ಬೈಲು ಇರುತ್ತದೆ.

ಈ ಪ್ರಾಂತದ ರಾಜಧಾನಿ **ದಮಸ್ಕಸ** ಪಟ್ಟಣವು. ಈ ಪಟ್ಟಣವು ಬುನಾದಿಯಿಂದ ವ್ಯಾಪಾರದ ವಿಷಯವಾಗಿ ಪ್ರಸಿದ್ಧವಾದದ್ದು. **ಅಲೆಪ್ಪೋ** ಎಂಬ ಬೇರೊಂದು ವ್ಯಾಪಾರದ ಪಟ್ಟಣವು ಉತ್ತರಭಾಗದಲ್ಲಿ ಇರುತ್ತದೆ. ಪ್ರಾಚೀನ ಕಾಲದಲ್ಲಿ ಹಿಂದುಸ್ತಾನ, ಅರಬಸ್ತಾನ, ಇರಾಣ ದೇಶದೊಳಗಿನ ಸರಕುಗಳು ಈಗಿನಂತೆ ಜಲಮಾರ್ಗದಿಂದ ಹೋಗದೆ ಸಿರಿಯಾ ದೇಶದ ಮಾರ್ಗದಿಂದ ಯುರೋಪಕ್ಕೆ ಹೋಗುತ್ತಿದ್ದವು. ಆಗ ಈ ಪ್ರಾಂತದಲ್ಲಿ ಹಲವು ದೊಡ್ಡ ದೊಡ್ಡ ಪಟ್ಟಣಗಳಿದ್ದವು. **ಸೈದನ, ತಾಯುರ** ಎಂಬ ಪ್ರಾಚೀನ ಪಟ್ಟಣಗಳಲ್ಲಿ ಕಾಜು ಮೊದಲು ಹುಟ್ಟಿತೆಂದು ಹೇಳುತ್ತಾರೆ. ಆ ಕಾಲದಲ್ಲಿ ಈ ಪಟ್ಟಣಗಳು ಜಲಪರ್ಯಟನದಲ್ಲಿಯೂ ವ್ಯಾಪಾರದಲ್ಲಿಯೂ ಹೆಸರಾಗಿದ್ದವು.

ಎಲ್ಲ ಬಗೆಯ ಮೇಲಾದ ವಸ್ತ್ರಗಳು ಈಗ್ಯೂ ಈ ಪ್ರಾಂತ ದಲ್ಲಿ ಹೊರಡುತ್ತವೆ. ಸಬಕಾರ,ಸ್ಪಂಜ,ತಂಬಾಕ,ಧಾನ್ಯಗಳು,ಹವಳ ಮುಂತಾದವುಗಳು ಈ ಪ್ರಾಂತದಿಂದ ಹೊರಗೆ ಹೋಗುತ್ತವೆ.

ಸಿರಿಯಾದೇಶದ ದಕ್ಷಿಣ ಭಾಗಕ್ಕೆ ಪಾಲಿಸ್ತೈನೆಂಬ ಹೆಸರುಂಟು. ಈ ಪ್ರಾಂತದಲ್ಲಿ ಮೊದಲು ಯಹುದೀ ಜನರು ಇರುತ್ತಿದ್ದರು. ಆದರೆ ಅವರು ಈಗ ಎಲ್ಲ ದೇಶಗಳಲ್ಲಿಯೂ ವಾಸಿಸುತ್ತಾರೆ. ಯೇಸು ಕ್ರಿಸ್ತನು ಇದೇ ಪ್ರಾಂತದಲ್ಲಿ ಹುಟ್ಟಿದನು. ಪಾಲಿಸ್ತೈನದ ರಾಜಧಾನಿಯು ಹೆಸರು **ಯೆರೂಸಲೆಮವು**. ಈ ಪ್ರಾಂತದಲ್ಲಿ ಹರಿಯುವ **ಜಾರ್ಡನೆಂಬ ಹೊಳೆಯು** ಇತಿಹಾಸದಲ್ಲಿ ಪ್ರಸಿದ್ಧವುಂಟು. ಅದು **ಮೃತಸಮುದ್ರವೆಂಬ** ಸರೋವರಕ್ಕೆ ಕೂಡುತ್ತದೆ. ಈ ಸರೋವರದ ನೀರು ಹೊರಗೆ ಹೋಗುವದಿಲ್ಲ. ಇದರೊಳಗೆ ಮೀನಗಳು ಬದುಕುವದಿಲ್ಲ; ಮತ್ತು ಇದರ ದಂಡೆಯಲ್ಲಿ ಗಿಡಗಳು ಹುಟ್ಟುವದಿಲ್ಲ. ಆದ್ದರಿಂದ ಇದಕ್ಕೆ ಮೃತಸಮುದ್ರವೆಂಬ ಹೆಸರು ಬಂದದೆ.

**೩. * ಅಲ್‌ಜೆಸಿರಾ, ಇರಾಕ ಅರಬಿ, ಕುರದಿಸ್ತಾನ ಎಂಬ ಪ್ರಾಂತಗಳುಳ್ಳ ಭಾಗವು**:—ಇದು ಸಿರಿಯಾ ಪ್ರಾಂತದ ಹಾಳು ಬೈಲಿಗೂ ಇರಾಣಕ್ಕೂ ನಡುವೆ ಇರುತ್ತದೆ. ಇದರಲ್ಲಿ ಅಲ್‌ಜೆಸಿರಾ, ಇರಾಕ ಅರಬಿ, ಕುರದಿಸ್ತಾನ ಎಂಬ ಪ್ರಾಂತಗಳುಂಟು. ಈ ಭಾಗವೆಲ್ಲ ಬಹುತರ ಟೈಗ್ರೀಸ, ಯುಫ್ರೇತೀಸ, ಇವೆರಡು ಹೊಳೆಗಳ ನಡುವೆ ಇರುತ್ತದೆ. ಈ ಹೊಳೆಗಳು ತಾರಸ ಪರ್ವತದಲ್ಲಿ ಹುಟ್ಟಿ, ದಕ್ಷಿಣಕ್ಕೆ ಹರಿದು, ಮಾರ್ಗದಲ್ಲಿ ಒಂದಕ್ಕೊಂದು ಕೂಡಿ, ಇರಾಣೀ ಆಖಾತಕ್ಕೆ ಹೋಗುತ್ತವೆ. ಈ ಪ್ರಾಂತದಲ್ಲಿ ನೀರು ವಿಪುಲವುಂಟು. ಪೂರ್ವಕಾಲದಲ್ಲಿ ಈ ದೇಶದ ಭೂಮಿಯು ಬಹು ಬೆಳೆಯುಳ್ಳದ್ದೆಂದು ಪ್ರಸಿದ್ಧವಾಗಿತ್ತು; ಆದರೆ ನದಿಗಳ ನೀರು ತಿರುವಿಕೊಳ್ಳದೆ ಇರುವದರಿಂದ ಅದು ಈಗ ಹಾಳು ಬಿದ್ದದೆ.

---

* ಮೊದಲು ಈ ಭಾಗಕ್ಕೆ ಮೆಸೆಪೊತೇಮಿಯ, ಅಂದರೆ ಎರಡು ಹೊಳೆಗಳ (ಟೈಗ್ರೀಸ-ಯುಫ್ರೇತೀಸಗಳ) ನಡುವಿನ ದೇಶ ಎಂದೆನ್ನುತ್ತಿದ್ದರು.

ಬಗದಾದೆಂಬ ಮುಖ್ಯ ಪಟ್ಟಣವು ತೈಗ್ರೀಸ ನದಿಯ ಧಡದಲ್ಲಿ ಇರುತ್ತದೆ. ಪೂರ್ವಕಾಲದಲ್ಲಿ ಖಲಿಫನೆಂಬ ಮುಸಲ್ಮಾನ ಧರ್ಮದ ಮುಖ್ಯ ಗುರು ಈ ಪಟ್ಟಣದಲ್ಲಿ ಇರುತ್ತಿದ್ದನು. ಇಲ್ಲಿ ವ್ಯಾಪಾರವು ಬಹಳ ನಡೆಯುತ್ತದೆ. ಯುಫ್ರೇತೀಸ ನದಿಯ ಧಡದಲ್ಲಿ ಇರುವ ಬಸರಾ ಎಂಬ ಪಟ್ಟಣದ ನಿವಾಸಿಗಳು ಇರಾಣ, ಹಿಂದುಸ್ತಾನ ಮುಂತಾದ ದೇಶಗಳ ಸಂಗಡ ಬಹು ದೊಡ್ಡ ವ್ಯಾಪಾರವನ್ನು ನಡಿಸುತ್ತಾರೆ. ಬಾಬಿಲನ ಪಟ್ಟಣವು ಪ್ರಾಚೀನ ಕಾಲದಲ್ಲಿ ಒಂದು ದೊಡ್ಡ ರಾಷ್ಟ್ರದ ರಾಜಧಾನಿಯಾಗಿತ್ತು. ಈ ಪಟ್ಟಣದಲ್ಲಿ ಶಿಕಂದರಬಾದಶಹನು ಕ್ರಿಸ್ತೀ ಶಕಕ್ಕೆ ಮುಂಚೆ ೩೨೩ ನೆಯ ವರ್ಷ ಮರಣ ಹೊಂದಿದನು. ಬಾಬಿಲನದ ಉತ್ತರದಲ್ಲಿ ನಿನವೆ ಎಂಬದೊಂದು ಬಹು ವಿಖ್ಯಾತವಾದ ಪ್ರಾಚೀನ ರಾಜಧಾನಿಯಿತ್ತು. ಅದರ ಕುರುಹುಗಳು ಈಗ್ಯೂ ಉಂಟು.

ಈ ಪ್ರಾಂತದವರ ಮುಖ್ಯ ಉದ್ಯೋಗಗಳು ಒಕ್ಕಲತನ, ನೇಯುವದು, ತಾಮ್ರದ ಪಾತ್ರೆಗಳನ್ನು ಮಾಡುವದು ಇತ್ಯಾದಿ ಉಂಟು.

ಸದ್ಯಕ್ಕೆ ನಡೆದಿರುವ ಯುರೋಪೀಯ ಮಹಾಯುದ್ಧದ ಒಂದು ಶಾಖೆಯು ಈ ಭಾಗದಲ್ಲಿ ನಡೆದದೆ.

೪ ಆರ್ಮಿನಿಯಃ—ಈ ಗುಡ್ಡದ ಸೀಮೆಯು ರಶಿಯದ ಅಗ್ನೇಯಕ್ಕಿರುತ್ತದೆ. ಇದರಲ್ಲಿ ಎತ್ತರವಾದ ಕಂದರಗಳುಂಟು. ಎರ್ಜರೂಮೆಂಬ ಮುಖ್ಯ ಪಟ್ಟಣವು ವ್ಯಾಪಾರದಲ್ಲಿ ಹೆಸರಾಗಿದೆ. ಕಪ್ಪು ಸಮುದ್ರದ ದಂಡೆಯಲ್ಲಿ ತ್ರಿಬಿಝೊಂದ ಎಂಬ ಬಂದರವದೆ. ಈ ಪ್ರಾಂತದ ಗುಡ್ಡಗಳಲ್ಲಿ ಲೋಹಗಳು ದೊರೆಯುತ್ತವೆ. ಮೇಲಾದ ನೂಲಿನ ಕೆಂಪು ವಸ್ತ್ರಗಳು ಈ ಪ್ರಾಂತದಲ್ಲಿ ಹುಟ್ಟುತ್ತವೆ. ಇದರ ದಕ್ಷಿಣಕ್ಕೆ ವಾನ್ ಎಂಬದೊಂದು ದೊಡ್ಡ ಸರೋವರವದೆ. ಈ ಪ್ರಾಂತದ ನಿವಾಸಿಗಳು ಸುರೂಪಿಗಳೆಂದು ಹೆಸರಾಗಿರುವರು. ಈ ಪ್ರಾಂತದ ಪೂರ್ವಭಾಗವು ರಶಿಯದವರ ವಶದಲ್ಲಿಯೂ ಆಗ್ನೇಯ ಭಾಗವು ಇರಾಣದವರ ವಶದಲ್ಲಿಯೂ ಇರುತ್ತದೆ.

## ೭ ತುರ್ಕಸ್ತಾನ.

ಈ ದೇಶದ ನಿವಾಸಿಗಳು ಮುಖ್ಯವಾಗಿ ತುರ್ಕಿ ಕುಲದವರು; ಆದರಿಂದ ಇದಕ್ಕೆ ತುರ್ಕಸ್ತಾನವೆಂಬ ಹೆಸರು ಬಂದದೆ. ಇದೇ ದೇಶದಲ್ಲಿ ಜೆಂಗಿಸಖಾನ, ತೈಮುರಲಂಗ ಮುಂತಾದ ವಿಖ್ಯಾತ ಕಲಿಗಳು ಹುಟ್ಟಿದರು. ಈ ದೇಶದ ಉತ್ತರಕ್ಕೆ ಸೈಬಿರಿಯ, ಪಶ್ಚಿಮಕ್ಕೆ ಕಾಸ್ಪಿಯನ್ ಸಮುದ್ರ, ದಕ್ಷಿಣಕ್ಕೆ ಹಿಂದುಕುಶ, ಕುಯೆನ್‌ಲನ ಎಂಬ ಪರ್ವತಗಳು, ಪೂರ್ವಕ್ಕೆ ಚಿನಯಿರಾಜ್ಯ, ಈ ಪ್ರಕಾರ ಮೇರೆಗಳುಂಟು.

ಈ ದೇಶದಲ್ಲಿ ಎರಡು ದೊಡ್ಡ ಬೈಲುಗಳುಂಟು. ಅವುಗಳ ನಡುವೆ ಪಾಮರಸ್ತೆಪ ಎಂಬ ತಪ್ಪಲ ಸೀಮೆಯೂ, ಬೋಲರ ತಾಗ, ಥಿಯನ್‌ಶನ್ ಎಂಬ ಪರ್ವತಗಳೂ ಉಂಟು. ಈ ಪರ್ವತಗಳು ಹಿಂದುಕುಶದಿಂದ ಆಲತಾಯಿ ಪರ್ವತದ ವರೆಗೆ ಹೋಗಿರುತ್ತವೆ. ಪಶ್ಚಿಮದ ಬೈಲಿನಲ್ಲಿ ಭೂಮಿಯಲ್ಲಿ ಎಲ್ಲಕ್ಕೂ ದೊಡ್ಡ ಸರೋವರವಾದ ಕಾಸ್ಪಿಯನ್ ಸಮುದ್ರವೂ, ಅರಲ್, ಬಾಲ್ಕಶ್ ಮುಂತಾದ ಬೇರೆ ಸರೋವರಗಳೂ ಉಂಟು; ಇವೆಲ್ಲ ಉಪ್ಪು ನೀರಿನವೇ. ಆಮೂದಾರಿಯಾ, ಸರದಾರಿಯಾ ಎಂಬ ಎರಡು ಹೊಳೆಗಳು ಈ ಬೈಲಿನಲ್ಲಿ ಹರಿದು, ಅರಲ್ ಸರೋವರಕ್ಕೆ ಕೂಡುತ್ತವೆ. ಈ ಹೊಳೆಗಳ ದಂಡೆಯ ಪ್ರದೇಶ ಹೊರ್ತಾಗಿ ಉಳಿದದ್ದೆಲ್ಲ ಹಾಳು ಉಸುಬಿನ ಬೈಲುಂಟು. ತುರ್ಕಸ್ತಾನದ ದಕ್ಷಿಣ-ಪೂರ್ವ ಭಾಗಗಳಲ್ಲಿ ಗುಡ್ಡಗಳೇ ಬಹಳ.

ಈ ದೇಶದಲ್ಲಿ— ೧. ಪಶ್ಚಿಮ ತುರ್ಕಸ್ತಾನ, ೨. ಪೂರ್ವ ತುರ್ಕಸ್ತಾನ ಎಂಬ ಎರಡು ಭಾಗಗಳಿವೆ.

**ಪಶ್ಚಿಮ-ತುರ್ಕಸ್ತಾನ:**—ಈಗ ಈ ಭಾಗವೆಲ್ಲ ರಶಿಯದ ರಾಜ್ಯಕ್ಕೆ ಸೇರಿರುತ್ತದೆ; ಆದದರಿಂದ ಇದಕ್ಕೆ ರಶಿಯನ್ ತುರ್ಕಸ್ತಾನವೆಂತಲೂ ಅನ್ನುವರು. ಇದರ ಮುಖ್ಯ ಪಟ್ಟಣವು ಬುಖಾರಾ. ಈ ಪಟ್ಟಣದಲ್ಲಿ ನಡೆಯುವ ಮಹಮ್ಮದೀ ವಿದ್ಯದ ಅಭ್ಯಾಸವು ಹೆಸರಾದದ್ದುಂಟು. ಖಿವಾ, ಖೋಕಂದ ಎಂಬೆರಡ

ಪ್ರಸಿದ್ಧ ಪಟ್ಟಣಗಳುಂಟು. ಖಿವಾ ಪಟ್ಟಣದಲ್ಲಿ ವ್ಯಾಪಾರವು ನಡೆಯುತ್ತದೆ; ಖೋಕಂದ ಪಟ್ಟಣವು ದಿಲ್ಲಿಯ ಬಾದಶಹನಾದ ಬಾಬರನ ವಶಿದಲ್ಲಿತ್ತು. ಬುಖಾರದ ದಕ್ಷಿಣಕ್ಕೆ ಮರ್ವ ಎಂಬದೊಂದು ಇರಾಣ ದೇಶದ ಹಳೆ ರಾಜಧಾನಿಯುಂಟು. ಇದಲ್ಲದೆ **ತಾಶಕಂದ, ಸಮರ್ಕಂದ** ಎಂಬ ಬೇರೆ ಪ್ರಸಿದ್ಧ ಪಟ್ಟಣಗಳುಂಟು. ಈ ಭಾಗದಲ್ಲಿ ಸರದಾರಿಯಾ ಎಂಬ ಹೊಳೆಯು ಹರಿಯುತ್ತದೆ.

**ಪೂರ್ವ-ತುರ್ಕಸ್ತಾನ:**— ಇದು ಮೊದಲಿನಿಂದ ಚೀನದ ರಾಜ್ಯಕ್ಕೆ ಸೇರಿದ್ದು ಒಳಗಡೆಯಲ್ಲಿ **ಯಾಕೂಬಬೇಗನೆಂಬವನು** ಇದನ್ನು ಗೆದ್ದು ಸ್ವತಂತ್ರದಿಂದ ಆಳುತ್ತಿದ್ದನು. ಆದರೆ ಅವನ ಕೊಲೆಯಾಗಿ ಈ ಭಾಗವು ಮತ್ತೆ ಚೀನದ ಸಾಮ್ರಾಜ್ಯಕ್ಕೆ ಸೇರಿತು. ಇದಕ್ಕೂ ಪಶ್ಚಿಮ ತುರ್ಕಸ್ತಾನಕ್ಕೂ ನಡುವೆ ಬೋಲರತಾಗ, ಥಿಯನ್‌ಶಾನ್ ಎಂಬ ಪರ್ವತಗಳಿವೆ. ಇದರ ಪೂರ್ವಕ್ಕೆ ಗೋಬಿ ಎಂಬ ಬಹು ದೊಡ್ಡ ಹಾಳು ಬೈಲು ಇರುತ್ತದೆ. ಅಪರಾಚೆಯಲ್ಲಿ ಚೀನ ದೇಶವದೆ. **ಕಾಶಗರ** ಪಟ್ಟಣವು ಈ ಭಾಗದ ರಾಜಧಾನಿಯು. ಬೇರೆ ದೊಡ್ಡ ಪಟ್ಟಣಗಳು **ಯಾರ್ಕಂದ, ಖೋತಾನ್** ಮುಂತಾದವುಗಳುಂಟು. ಯಾರ್ಕಂದ ಎಂಬದೊಂದೇ ಹೊಳೆಯು ಈ ಪ್ರಾಂತದಲ್ಲಿ ಹರಿಯುತ್ತದೆ. ಅದು ಪೂರ್ವಕ್ಕೆ ಹರಿದು ಗೋಬಿಯ ಅರಣ್ಯದಲ್ಲಿ ಒಂದು ಸರೋವರಕ್ಕೆ ಕೂಡುತ್ತದೆ. ಈ ಪ್ರಾಂತದವರು ರಶಿಯನ್ ತುರ್ಕಸ್ತಾನದ ನಿವಾಸಿಗಳ ಸಂಗಡ ಬಹಳ ವ್ಯಾಪಾರ ನಡಿಸುತ್ತಾರೆ. ಹಿಂದುಸ್ತಾನದಿಂದ ಕೆಲವು ಸರಕುಗಳು ಈ ದೇಶಕ್ಕೆ ಹೋಗುತ್ತವೆ.

## ೭. ರಶಿಯದ ರಾಜ್ಯವು.

ಇದರಲ್ಲಿ ತ್ರಾನ್ಸಕಾಕೇಶಿಯಾ, ಸೈಬೀರಿಯಾ, ರಶಿಯನ್ ತುರ್ಕಸ್ತಾನ ಎಂದು ಮೂರು ಬೇರೆ ಬೇರೆ ಭಾಗಗಳುಂಟು.

೧. **ತ್ರಾನ್ಸ ಕಾಕೇಶಿಯಾ:**—ಏಶಿಯ-ಯುರೋಪಗಳ ನಡುವಿರುವ ಕಾಕೇಸಸ ಪರ್ವತದ ದಕ್ಷಿಣ ಪ್ರದೇಶಕ್ಕೆ ಈ ಹೆಸರುಂಟು.

ಈ ಪ್ರಾಂತದ ರಾಜಧಾನಿಯಾದ ತಿಪ್ಲಿಸ ಎಂಬ ಪಟ್ಟಣದಲ್ಲಿ ವ್ಯಾಪಾರವು ಬಹಳ ನಡೆಯುತ್ತದೆ. ಎರಿವಾನವೆಂಬ ಬೇರೊಂದು ದೊಡ್ಡ ಪಟ್ಟಣ ಉಂಟು. ಈ ಭಾಗದ ನೈಋತ್ಯಕ್ಕಿರುವ ಕಾರ್ಸೆಂಬ ಕೋಟೆಯನ್ನೂ ಬ್ಯಾತುಮ ಎಂಬ ಬಂದರವನ್ನೂ ಇವುಗಳ ಸೆರೆಯಲ್ಲಿ ೧೨,೦೦೦ ಚಚ್ಚೌಕು ಮೈಲಿನ ಪ್ರದೇಶವನ್ನೂ ರಶಿಯದವರು ಯುರೋಪದೊಳಗಿನ ತುರ್ಕೀದೇಶದ ಸುಲ್ತಾನನಿಂದ ಒಳಗಡೆಯಲ್ಲಿ ಗೆದ್ದುಕೊಂಡರು. ಉಳಿದ ಯಾವತ್ತು ಪ್ರದೇಶವನ್ನು ಇರಾಣದ ಶಹನ ಕಡೆಯಿಂದ ತಕ್ಕೊಂಡರು.

೨. ಸೈಬಿರಿಯಾ:—ಇದು ಏಶಿಯಖಂಡದಲ್ಲಿ ಎಲ್ಲಕ್ಕೂ ಉತ್ತರಕ್ಕಿರುವ ದೇಶವು. ಇದರ ಪಶ್ಚಿಮಕ್ಕೆ ಉರಲ್ ಪರ್ವತವೂ ಉರಾಲ ನದಿಯೂ ಉಂಟು; ದಕ್ಷಿಣಕ್ಕೆ ಆಲತಾಯಿ ಪರ್ವತವೂ ಆಮೂರೆಂಬ ❁ ಹೊಳೆಯೂ ಇರುತ್ತವೆ. ಆಲತಾಯಿ, ಉರಲ್ ಇವೆರಡೂ ಪರ್ವತಗಳಲ್ಲಿ ಪ್ಲಾಟಿನಂ, ಚಿನ್ನ ಬೆಳ್ಳಿ ಮುಂತಾದ ಲೋಹಗಳು ದೊರೆಯುತ್ತವೆ.

ಆಮೂರನದಿಯ ಹೊರ್ತಾಗಿ ಈ ದೇಶದಲ್ಲಿ ಓಬಿ, ಯೆನಸಿ, ಲೇನಾ ಎಂಬ ಮೂರು ದೊಡ್ಡ ಹೊಳೆಗಳುಂಟು. ಅವೆಲ್ಲ ಆಲತಾಯಿ ಪರ್ವತದಲ್ಲಿ ಹುಟ್ಟಿ, ಉತ್ತರಮಹಾಸಾಗರಕ್ಕೆ ಕೂಡುತ್ತವೆ. ಆಮೂರನದಿಯಾದರೂ ಅದೇ ಪರ್ವತದಲ್ಲಿ ಉಗಮವಾಗಿ, ಪೂರ್ವಕ್ಕೆ ಹರಿದು, ಓಖಾಟಸ್ಕದ ಸಮುದ್ರಕ್ಕೆ ಕೂಡುತ್ತದೆ.

ಓಬಿಯ ಆಖಾತವು ಉತ್ತರ-ಮಹಾಸಾಗರದಲ್ಲಿ ಇರುತ್ತದೆ. ಆನಾದಿರದ ಆಖಾತವು ಪಾಸಿಫಿಕ ಮಹಾಸಾಗರದಲ್ಲಿರುತ್ತದೆ. ತಾರ್ತರಿಯ ಆಖಾತವು ಸೈಬೀರಿಯಕ್ಕೂ ಸಾಘಲೀನ ಎಂಬ ದ್ವೀಪಕ್ಕೂ ನಡುವೆ ಇರುತ್ತದೆ; ಅದು ಜಪಾನದ ಸಮುದ್ರವನ್ನು ಓಖಾಟಸ್ಕದ ಸಮುದ್ರಕ್ಕೆ ಕೂಡಿಸುತ್ತದೆ.

---

❁ ಆಮೂರನದಿಯ ಆಗ್ನೇಯಕ್ಕಿರುವ ಸಮುದ್ರ ತೀರದ ಸ್ವಲ್ಪ ಪ್ರದೇಶವನ್ನು ರಶಿಯದವರು ಚೀನದ ಬಾದಶಹನ ಕಡೆಯಿಂದ ಒಳಗಡೆಯಲ್ಲಿ ಗೆದ್ದುಕೊಂಡಿರುತ್ತಾರೆ.

ಈ ದೇಶದ ಪೂರ್ವಕ್ಕೂ ಉತ್ತರಕ್ಕೂ ಹಲವು ದ್ವೀಪಗಳಿವೆ; ಅವುಗಳಲ್ಲಿ ಸಾಘಲೀನ ದ್ವೀಪವು ಮುಖ್ಯವುಂಟು. ಓಖಾಟಸ್ಕದ ಸಮುದ್ರಕ್ಕೂ ಕಾಮಾಶ್ಚಟಕಾದ ಸಮುದ್ರಕ್ಕೂ ನಡುವೆ ಕಾಮಶ್ಚಾಟಕಾ ದ್ವೀಪಕಲ್ಪವಿರುತ್ತದೆ. ಈ ದ್ವೀಪಕಲ್ಪದ ದಕ್ಷಿಣತುದಿಗೆ ಕೇಪ ಲೋಪಾಟಕಾ ಎಂಬ ಹೆಸರುಂಟು. ಸೈಬೀರಿಯದ ಪೂರ್ವ ಬಿಂದುವಿಗೆ ಪೂರ್ವ ಕೇಪ ಎನ್ನುವದುಂಟು.

ಈ ದೇಶದಲ್ಲಿ ಪೂರ್ವಸೈಬೀರಿಯ ಪಶ್ಚಿಮಸೈಬೀರಿಯ ಎಂದು ಎರಡು ಭಾಗಗಳುಂಟು. ಇವೆರಡು ಭಾಗಗಳ ರಾಜಧಾನಿಗಳು ಕ್ರಮವಾಗಿ ಅರ್ಕತಸ್ಕ, ತೋಬಾಲಸ್ಕ ಎಂಬ ಪಟ್ಟಣಗಳುಂಟು. ಇವೆರಡೂ ಭಾಗಗಳಲ್ಲಿ ಚಳಿಯು ಅತಿಶಯವಿರುತ್ತದೆ. ಪಶ್ಚಿಮ ಭಾಗದಲ್ಲಿ ದೊಡ್ಡ ದೊಡ್ಡ ಜವಳು ಬೈಲುಗಳುಂಟು. ಅವುಗಳಲ್ಲಿ ಉಪ್ಪುನೀರು ಅಲ್ಲಲ್ಲಿಗೆ ತುಂಬಿ ನಿಂತಿರುತ್ತದೆ. ಪೂರ್ವಭಾಗದಲ್ಲಿ ಗುಡ್ಡಗಳು ಬಹಳ; ಆದರೆ ಅದರ ದಕ್ಷಿಣ ಭಾಗದಲ್ಲಿ ಬೆಳೆಯುಳ್ಳ ಕಂದರಗಳು ಹಲವುಂಟು. ಈ ಭಾಗದಲ್ಲಿ ಬೈಕಲ್ಲೆಂಬ ಸರೋವರವದೆ. ಭೂಮಿಯ ಮೇಲಿರುವ ಸೀನೀರಿನ ಎತ್ತರವಾದ ಸರೋವರಗಳಲ್ಲೆಲ್ಲ ಇದು ದೊಡ್ಡದಿರುತ್ತದೆ.

**ರಶಿಯನ್ ತುರ್ಕಸ್ತಾನಃ**— ( ಪಶ್ಚಿಮತುರ್ಕಸ್ತಾನದ ವರ್ಣನೆ ನೋಡು. )

## ೮ ಜಪಾನವು.

ಹಲವು ದ್ವೀಪಗಳುಕೂಡಿ ಈ ರಾಜ್ಯವಾಗಿರುತ್ತದೆ. ಈ ದ್ವೀಪಗಳಿಗೂ ಏಶಿಯ ಖಂಡಕ್ಕೂ ನಡುವೆ ಜಪಾನದ ಸಮುದ್ರವದೆ. ಜಪಾನೀ ರಾಜ್ಯವು ನಿಪನ್, ಯೆಸ್ಸೊ, ಕ್ಯೂಶಿಯು, ಶಿಕೋಕು, ಫೊರ್ಮೋಸಾ ಎಂಬ ಐದು ದೊಡ್ಡ ದ್ವೀಪಗಳು ಕೂಡಿ ಆಗಿರುತ್ತದೆ. ಇವಲ್ಲದೆ ಪಾಸಿಫಿಕ ಮಹಾಸಾಗರದಲ್ಲಿ ಇನ್ನು ಕೆಲವು ಸಣ್ಣದ್ವೀಪಗಳು ಜಪಾನದ ರಾಜ್ಯಕ್ಕೆ ಸೇರಿರುತ್ತವೆ. ಈ ರಾಜ್ಯ ದಕ್ಷೇತ್ರಫಲವು೧,೬೧,೦೦೦ಚಚ್ಚೌಕು ಮೈಲು; ಜನಸಂಖ್ಯೆಸುಮಾರು ೪॥ ಕೋಟಿ ಉಂಟು. ಫೊರ್ಮೋಸಾ ಮತ್ತು ಅದರ ನೆರೆಯ ಸಣ್ಣ

ದ್ವೀಪಗಳನ್ನು ಜಪಾನರು ಸನ್ ೧೮೯೫ನೇ ವರ್ಷ ಚೀನ ಸರಕಾರದ ದಂಡು ಜಯಿಸಿ ಆಕ್ರಮಿಸಿದರು. ಒಂದೇ ನಿಪನ್ ದ್ವೀಪವು ಇಂಗ್ಲಂಡ ಸ್ಕಾಟಲಂಡಗಳಷ್ಟು ದೊಡ್ಡದಿರುತ್ತದೆ. ಜಪಾನೀ ಜನರಿಗೆ ಒಳಗಡೆಯಲ್ಲಿ ಪೂರ್ವದಿಕ್ಕಿನ ಇಂಗ್ಲಿಷರೆಂದು ಹೆಸರು ಬಿದ್ದಿರುವದು. ಯಾಕಂದರೆ ಯುರೋಪದಲ್ಲಿ ಇಂಗ್ಲಿಷರಿಗಿರುವಷ್ಟೇ ಗೌರವವನ್ನು ಏಶಿಯಾ ಖಂಡದಲ್ಲಿ ಜಪಾನರು ಸಂಪಾದಿಸಿರುವರು.

**ಪರ್ವತಗಳು**:—ಜಪಾನದ ಮುಖ್ಯ ದ್ವೀಪಗಳಲ್ಲಿ ಪರ್ವತಗಳೇ ಬಹಳ ಉಂಟು. ನಿಪನ್ ದ್ವೀಪದಲ್ಲಿ ಮೂರು ಮೈಲು ಎತ್ತರವಾಗಿ ಬೆಳೆದ ಫೂಸಿಯಾಮಾ ಎಂಬ ಪರ್ವತವು ಕ್ಷೇತ್ರಸ್ಥಾನವೆಂದು ಎಣಿಸಲ್ಪಡುತ್ತದೆ. ಉರಿಯುವ ಜ್ವಾಲಾಮುಖೀ ಪರ್ವತಗಳು ಈ ದ್ವೀಪದಲ್ಲಿ ಬಹಳಿರುತ್ತವೆ; ಭೂಕಂಪಗಳು ಆಗಾಗ್ಗೆ ಆಗುತ್ತಿರುತ್ತವೆ. ಒಮ್ಮೊಮ್ಮೆ ಭೂಕಂಪದಿಂದ ಬಹಳ ಕೇಡಾಗುತ್ತದೆ. ತಗ್ಗು ಪ್ರದೇಶಗಳಲ್ಲಿ ಭೂಮಿಯು ಬೆಳೆಯುಳ್ಳದ್ದಿದ್ದು ಅದರಲ್ಲಿ ಬತ್ತ, ಗೋದಿ, ಬೇಳೆಯ ಕಾಳುಗಳು, ಹತ್ತಿ, ತಂಬಾಕ ಮುಂತಾದ ಪೈರುಗಳು ಬರುತ್ತವೆ. ಚಹಾ ಗಿಡವು ಎಲ್ಲಕಡೆಯಲ್ಲಿ ಅಡವೀ ಕಸದಂತೆ ತನಗೆ ತಾನೇ ಬೇಲಿಗಳಲ್ಲಿ ಸಹ ಬೆಳೆಯುತ್ತದೆ. ಬೀನಾ ಎಂಬ ಸರೋವರವು ಬಹು ರಮಣೀಯವಾಗಿರುತ್ತದೆ. ಉತ್ತರ ಭಾಗದ ಹವೆಯು ಹೆಚ್ಚು ತಂಪಾಗಿರುವದು; ದಕ್ಷಿಣ ಭಾಗದಲ್ಲಿ ಅಷ್ಟು ಚಳಿ ಇಲ್ಲ.

**ನಿವಾಸಿಗಳು**:—ಜಪಾನರು ಗಿಡ್ಡರಾದಾಗ್ಯೂ ಒಳ್ಳೇ ಬುದ್ಧಿವಂತರೂ, ವಿದ್ಯಾಕಲಾಕೌಶಲ್ಯಗಳಲ್ಲಿ ನಿಪುಣರೂ, ಶೌರ್ಯಶಾಲಿಗಳೂ ಇರುವರು. ಇವರು ಮೊಂಗೋಲಿಯನ್ ಕುಲದವರು. ನಾನಾಪ್ರಕಾರದ ಹೂವಿನ ತೋಟಗಳನ್ನು ಬಹು ಚಾತುರ್ಯದಿಂದ ರೂಪಿಸುವರು. ಇವರಲ್ಲಿ ಯೆಜ್ಜೋ ದ್ವೀಪನಿವಾಸಿಗಳಾದ ಐನೊ ಎಂಬ ಜನಾಂಗದವರು ಅಜ್ಞಾನಿಗಳೂ ಅಶಿಕ್ಷಿತರೂ ಇರುವರು. ಜಪಾನದ ಅರಸನಿಗೆ ಮಿಕಾಡೊ (ಪೂಜ್ಯ) ಎಂಬ ಬಿರುದುಂಟು. ಇವನು ಸನ್ ೧೮೬೮ ನೇ ವರ್ಷದ ವರೆಗೆ

ಸ್ವತಂತ್ರದಿಂದ ರಾಜ್ಯವಾಳುತ್ತಿದ್ದನು. ಆದರೆ ಆ ವರ್ಷ ಇಂಗ್ಲಂಡದ ಪಾರ್ಲಮೆಂಟಿನಂತೆ ಎರಡು ಸಭೆಗಳ ಸ್ಥಾಪನೆಯಾಗಿ, ಕಾಯುದೆಗಳನ್ನು ಮಾಡುವ ಅಧಿಕಾರವು ಅವಕ್ಕೆ ಕೊಡಲ್ಪಟ್ಟಿತು. ಈಗ ಇಂಗ್ಲಂಡದಂತೆಯೇ ಜಪಾನದಲ್ಲಿ ರಾಜ್ಯಕಾರಭಾರ ನಡಿಯುತ್ತದೆ. ಪೂರ್ವದ ಶೂರ ಪುರುಷರನ್ನು ಪೂಜಿಸುವ **ಶಿಂಟೊ** ಎಂಬ ಧರ್ಮವೂ ಬೌದ್ಧ ಧರ್ಮವೂ ಜಪಾನದಲ್ಲಿ ಒಂದಕ್ಕೊಂದು ಜೋಡಾಗಿ ನಡೆಯುತ್ತವೆ.

**ವ್ಯಾಪಾರದ ಜೀನಸುಗಳು:**—ಈ ದೇಶದಲ್ಲಿ ಕತ್ತಿಗಳೂ, ಮಣ್ಣಿನ ಪಾತ್ರೆಗಳೂ, ಬಣ್ಣದ ಸಾಮಾನುಗಳೂ, ನೂಲುರೇಶಿಮೆಗಳ ವಸ್ತ್ರಗಳೂ, ಕಾಗದಗಳೂ ಹುಟ್ಟುತ್ತವೆ. ಕಣಿಗಳಲ್ಲಿ ಚಿನ್ನ, ಬೆಳ್ಳಿ, ತಾಮ್ರ, ಇದ್ದಲಿಗಳೂ ದೊರೆಯುತ್ತವೆ. ಈ ಪದಾರ್ಥಗಳ ವ್ಯಾಪಾರವು ಬಹಳ ನಡೆಯುತ್ತದೆ.

**ಪಟ್ಟಣಗಳು:**—**ಯೆಡೊ** ಅಥವಾ **ಟೋಕಿಯೋ** ರಾಜಧಾನಿಯು **ನಿಪನ್** ದ್ವೀಪದಲ್ಲಿ ಇರುತ್ತದೆ. ಇದರಲ್ಲಿ ೧೪,೪೦,೦೦೦ ಜನರ ವಸ್ತಿಯುಂಟು. ಇದರ ಬಳಿಯಲ್ಲಿ **ಯಾಕೋ ಹಾಮಾ** ಎಂಬ ಮುಖ್ಯ ಬಂದರವಿದೆ. **ಒಸಾಕಾ** ಎರಡನೆಯ ದೊಡ್ಡ ಪಟ್ಟಣವು; **ಕಿಯೊತೊ** ಹಳೆ ರಾಜಧಾನಿಯು. **ಕಿಯಾಸಿಯಾ** ದ್ವೀಪದಲ್ಲಿ **ನಾಗಸಕಿ** ಎಂಬ ದೊಡ್ಡ ಬಂದರವಿದೆ.

ಜಪಾನರು ಪೂರ್ವದಲ್ಲಿ ಅಪ್ರಸಿದ್ಧರಾಗಿದ್ದರು. ಆದರೆ ರಶಿಯನ್ ಸರಕಾರದವರು ಚೀನದ ಮಂಚೂರಿಯ ಪ್ರಾಂತದಲ್ಲಿಯೂ ಕೋರಿಯವೆಂಬ ಸ್ವತಂತ್ರ ದೇಶದಲ್ಲಿಯೂ ಹೆಚ್ಚು ಹೆಚ್ಚು ಕಾಲು ಚಾಚುತ್ತ ನಡೆದದ್ದರಿಂದ ಸನ್ ೧೯೦೪ ನೇ ವರ್ಷ ರಶಿಯದವರಿಗೂ ಜಪಾನದವರಿಗೂ ಯುದ್ಧವಾಗಿ ೧॥ ವರ್ಷ ಏಕಪ್ರಕಾರವಾಗಿ ನಡೆಯಿತು. ಈ ಅವಧಿಯಲ್ಲಿ ಒದಗಿದ ಹತ್ತಿಪ್ಪತ್ತು ಕಡುಕಾಳಗಗಳಲ್ಲೆಲ್ಲ ಜಪಾನರಿಗೆ ಜಯವಾಗಿ, ಏಳೆಂಟುಲಕ್ಷ ರಶಿಯನ್ ದಂಡಾಳುಗಳು ರಣಭೂಮಿಯಲ್ಲಿ ಬಿದ್ದರು. ಇದರಿಂದ ಜಪಾನರ ಶೌರ್ಯವು ಜಗತ್ತಿನಲ್ಲೆಲ್ಲ ವಿಖ್ಯಾತವಾಗಿ ಯುರೋ

ಪದ ಪ್ರಮುಖ ರಾಷ್ಟ್ರಗಳಲ್ಲಿ ಜಪಾನ ದೇಶವು ಗಣನೆ ಹೊಂದಿತು. ಈ ಯುದ್ಧದ ಕಡೆಯಲ್ಲಿ ಸಾಘಲೀನ ದ್ವೀಪದ ದಕ್ಷಿಣ ಕಡೆಯ ಅರ್ಧ ಭಾಗವನ್ನು ಜಪಾನರು ರಶಿಯನ್ ಸರಕಾರದಿಂದ ಸಂಪಾದಿಸಿದ್ದಲ್ಲದೆ, ಒಳಗಡೆಯಲ್ಲಿ ಕೋರಿಯಾ ದೇಶವನ್ನೂ ಆಕ್ರಮಿಸಿದರು. ಈಗ ಮಂಚೂರಿಯ ಪ್ರಾಂತದಲ್ಲಿ ಹೆಸರಿಗೆ ಮಾತ್ರ, ಚೀನದ ಅಧಿಕಾರ ನಡೆಯುತ್ತಿದ್ದು, ನಿಜವಾಗಿ ಅದು ಜಪಾನರ ಕೈಸೇರಿಂದತೆಯೇ ಇರುತ್ತದೆ. ಮಂಚೂರಿಯದ ದಕ್ಷಿಣದಲ್ಲಿ ಇರುವ ಪೋರ್ಟಆರ್ಥರ ಎಂಬ ಹೆಸರಾದ ಬಂದರವು ಜಪಾನರ ಕೈಗೆ ರಶಿಯದವರಿಂದ ಬಂತು.

ಸದ್ಯಕ್ಕೆ ನಡೆದಿರುವ ಮಹಾಯುದ್ಧದಲ್ಲಿ ಜಪಾನವು ಇಂಗ್ಲಿಷರ ಪಕ್ಷಕ್ಕೆ ಸೇರಿದ್ದಾಗಿದೆ.

ಕೋರಿಯ:—ಇದರ ಉತ್ತರದಲ್ಲಿ ಮಂಚೂರಿಯ ಪ್ರಾಂತವೂ, ಪಶ್ಚಿಮ ದಕ್ಷಿಣಗಳಲ್ಲಿ ಪೀತ ಸಮುದ್ರವೂ, ಪೂರ್ವಕ್ಕೆ ಜಪಾನ ಸಮುದ್ರವೂ, ಉಂಟು ಈ ದೇಶದ ವಿಸ್ತಾರ ಸುಮಾರು ೮೨,೦೦೦ ಚಚ್ಚೌಕು ಮೈಲು, ಜನಸಂಖ್ಯೆ ೧॥ ಕೋಟಿ ಉಂಟು.

ಇ.ಸ.೧೮೯೫ ರ ವರೆಗೆ ಕೋರಿಯ ದೇಶವು ಸ್ವತಂತ್ರವಾಗಿದ್ದು ಚೀನದ ಮೇಲಧಿಕಾರಕ್ಕೆ ಮಾತ್ರ ಒಳಗಾಗಿತ್ತು. ಇ ಸ. ೧೮೯೫ ರಲ್ಲಿ ಅದು ಜಪಾನದ ಮೇಲಧಿಕಾರಕ್ಕೆ ಒಳಗಾಗಿತ್ತು. ಮುಂದೆ ೧೯೧೦ ರಲ್ಲಿ ಜಪಾನರು ಅದನ್ನು ತಮ್ಮ ರಾಜ್ಯಕ್ಕೆ ಜೋಡಿಸಿದರು.

ಈ ದೇಶದ ಭೂಮಿಯು ಫಲವುಳ್ಳದ್ದು; ನಿವಾಸಿಗಳ ಮುಖ್ಯ ಹೋರೆ ಒಕ್ಕಲತನವು; ಅಕ್ಕಿ, ಗೋದಿ, ಬೇಳೇಕಾಳು, ತಂಬಾಕ ಮುಂತಾದ ಪೈರುಗಳು ಬೆಳಿಸಲ್ಪಡುತ್ತವೆ. ಕಣಿಗಳಲ್ಲಿ ಚಿನ್ನ, ತಾಮ್ರಗಳು ದೊರೆಯುತ್ತವೆ. ಬೌದ್ಧಧರ್ಮವೇ ಪ್ರಮುಖ್ಯವಾಗಿ ನಡೆಯುತ್ತದೆ. ಜಪಾನರ ಕೈಸೇರಿದಾಗಿನಿಂದ ವ್ಯಾಪಾರವು ಬೆಳೆಯುತ್ತಲಿದೆ. ಆದರೆ ಜನರು ಸೋಮಾರಿಗಳು.

ಪಟ್ಟಣಗಳು:—ಸಿಯೋಲ್ ಎಂಬ ರಾಜಧಾನಿಯಲ್ಲಿ ೨,೮೦,೦೦೦ ವಸ್ತಿಯುಂಟು. ಚೆಮುಲ್‌ಪೊ, ಪೂಂಸನ, ಯುಎನ್‌ಸನ್ನ ಎಂಬ ಬಂದರಗಳು ಮುಖ್ಯ ಉಂಟು.

## ೯ ಚೀನದ ರಾಜ್ಯವು.

ಕ್ಷೇತ್ರಫಲದ * ಮಾನದಿಂದ ಚೀನದ ರಾಜ್ಯವು ಭೂಮಿಯಲ್ಲಿ ಮೂರನೆಯದೆನಿಸಿಕೊಳ್ಳುತ್ತದೆ. ರಶಿಯದ ರಾಜ್ಯವು ಮೊದಲನೆಯದು, ಬ್ರಿಟಿಶ್ ರಾಜ್ಯವು ಎರಡನೆಯದು. ಆದರೆ ಜನಸಂಖ್ಯೆಯ ಮಾನದಿಂದ ಚೀನದ ರಾಜ್ಯವು ಮೊದಲನೆಯದೆನಿಸಿಕೊಳ್ಳುತ್ತದೆ. ಈ ರಾಜ್ಯದಲ್ಲಿ ಚೀನ, ತಿಬೇಟ, ಮಂಚೂರಿಯ, ಮೊಂಗೋಲಿಯ, ಪೂರ್ವ ತುರ್ಕಸ್ತಾನ ಎಂಬ ಐದು ಭಾಗಗಳಿವೆ.

**ಚೀನ ದೇಶವು:**—ಈ ದೇಶಕ್ಕೂ ತಿಬೇಟಕ್ಕೂ ನಡುವೆ ಎತ್ತರವಾದ ಪರ್ವತಗಳಿವೆ; ಅವುಗಳಿಗೆ ಬರ್ಫದ (ಸ್ನೋಯಿ) ಪರ್ವತಗಳೆನ್ನುವರು. ಪೆಯಿಹೊ, ಹೋಆಂಗಹೋ, ಯಾಂಗತ್ಸೀಕ್ಯಾಂಗ, ಕಂತಾನ ಎಂಬ ದೊಡ್ಡ ಹೊಳೆಗಳು ಈ ಪರ್ವತಗಳಲ್ಲಿ ಉಗಮವಾಗಿ, ಚೀನದೇಶದಲ್ಲಿ ಹರಿದು ಪಾಸಿಫಿಕ ಮಹಾಸಾಗರಕ್ಕೆ ಕೂಡುತ್ತವೆ. ಚೀನದ ವಶದಲ್ಲಿದ್ದ ದ್ವೀಪಗಳಲ್ಲಿ ಹೈನಾನ, ಫೊರ್ಮೋಸಾ ಎಂಬ ಎರಡು ಮುಖ್ಯ ದ್ವೀಪಗಳುಂಟು. ಫೊರ್ಮೋಸಾ ದ್ವೀಪವು ಪೀತಸಮುದ್ರಕ್ಕೂ ಚಿನಯಿ ಸಮುದ್ರಕ್ಕೂ ನಡುವೆ ಇರುತ್ತದೆ. ಈ ದ್ವೀಪಕ್ಕೂ ಚೀನಕ್ಕೂ ನಡುವೆ ಇದೇ ಹೆಸರಿನ ಸಾಮುದ್ರಧುನಿಯುಂಟು. ಆದರೆ ಇದನ್ನು ಸನ್ ೧೮೯೫ನೇ ವರ್ಷ ಜಪಾನರು ತಕ್ಕೊಂಡರು.

ಪೇಕಿನ ಪಟ್ಟಣವು ಚೀನದ ಹಳೆ ರಾಜಧಾನಿಯು. ಯಾಂಗತ್ಸೀ ನದಿಯ ಧಡದಲ್ಲಿರುವ ನಾಂಕೀನೆಂಬ ಬಂದರವು ವ್ಯಾಪಾರದ

* ಕೆಳಗೆ ಬರೆದ ರಾಜ್ಯಗಳು ಭೂಮಿಯಲ್ಲಿ ದೊಡ್ಡವೆಂದು ಎಣಿಸಲ್ಪಡುತ್ತವೆ.

| | ಕ್ಷೇತ್ರಫಲ ಚಚ್ಚೌಕು ಮೈಲು | ಜನಸಂಖ್ಯೆ |
|---|---|---|
| ಬ್ರಿಟಿಶ ರಾಜ್ಯವು ... ... | ೧೬,೯೨,೦೬೧ ... | ೩೫,೬೦,೦೨,೦೦೦ |
| ರಶಿಯದ ರಾಜ್ಯವು ... | ೮೯,೪೪,೧೦೦ ... | ೧೧,೧೪,೧೫,೮೫೦ |
| ಚೀನದ ರಾಜ್ಯವು ... ... | ೩೯,೨೨,೦೦೦ ... | ೩೯,೨೪,೪೭,೦೦೦ |
| ಯುನೈಟೆಡ್ ಸ್ಟೇಟ್ಸ್ .. | ೩೫,೦೦,೦೦೦ ... | ೯,೦೫,೯೭,೦೫೭ |
| ಬ್ರಾಜಿಲದ ರಾಜ್ಯವು | ೩೨,೧೯,೦೦೦ ... | ೧,೩೦,೦೨,೦೦೦ |

ದೆಸೆಯಿಂದ ಹೆಸರಾಗಿರುತ್ತದೆ; ಅದೇ ಈಗ ೧೯೧೨ರಿಂದ ಚೀನದ ರಾಜಧಾನಿಯಾಗಿದೆ. ನಾಂಕೀನದ ಸರೆಯಲ್ಲಿ ಶಾಂಘಾಯ ಎಂಬ ಬಂದರವದೆ; ದಕ್ಷಿಣದಲ್ಲಿ ಕಂತಾನ ಬಂದರವು ಹೆಸರಾದದ್ದು. ಈ ದೇಶದಿಂದ ಚಹ, ಸಕ್ಕರೆ, ರೇಶಿಮೆ, ಸಾಟೀನ ಎಂಬ ರೇಶಿಮೆಯ ವಸ್ತ್ರವು, ಆಟದ ಒಡವೆಗಳು, ಮಣ್ಣಿನ ಪಾತ್ರೆಗಳು ಮೊದಲಾದ ಸರಕುಗಳು ಪರದೇಶಗಳಿಗೆ ಹೋಗುತ್ತವೆ. ಹಿಂದುಸ್ತಾನದಿಂದ ಅಫು, ಸೂಲಿನ ವಸ್ತ್ರಗಳು ಈ ದೇಶಕ್ಕೆ ಬಹಳ ಹೋಗುತ್ತವೆ. ಕಂತಾನ ನದಿಯ ಮುಖದಲ್ಲಿ ಇರುವ ಹಾಂಗ್‌ಕಾಂಗ ಎಂಬ ದ್ವೀಪವು ಇಂಗ್ಲಿಷರ ವಶದಲ್ಲಿಯೂ, ಮಕಾವು ಎಂಬ ದ್ವೀಪವು ಪೋರ್ತುಗೀಜರ ವಶದಲ್ಲಿಯೂ ಉಂಟು. ಇವಲ್ಲದೆ ಕೌಲೂನೆಂಬ ಸಣ್ಣ ಪ್ರಾಂತದ ವೆಯಿಹಾಯವೆ ಎಂಬ ಬಂದರವನ್ನು ಇಂಗ್ಲಿಷರು, ಕಿಯಾವೊಚಾ ಎಂಬ ಪ್ರಾಂತವನ್ನು ಜರ್ಮನ್ನರು ಒಳಗಡೆಯಲ್ಲಿ ಸಂಪಾದಿಸಿದರು.

ಚೀನೀ ಜನರು ಬಹಳ ಬುದ್ಧಿವಂತರೂ ಉದ್ಯೋಗಿಗಳೂ ಇರುತ್ತಾರೆ. ಅವರು ಬಹಳ ಕಾಲಿವೆಗಳನ್ನು ಅಗಿದು, ಒಕ್ಕಲತನವನ್ನು ಸುಧಾರಿಸಿಕೊಂಡಿರುತ್ತಾರೆ. ಅವರು ಚಹಕ್ಕೆ ಬಹಳ ಮೆಚ್ಚಿರುತ್ತಾರೆ. ಮಣ್ಣಿನ ಪಾತ್ರೆಗಳನ್ನು ಮಾಡುವದರಲ್ಲಿಯೂ ರೇಶಿಮೆಯನ್ನು ಮಾಡುವದರಲ್ಲಿಯೂ ಚೀನೀ ಜನರಿಗೆ ಸಮಾನರು ಯಾರೂ ಇಲ್ಲ. ಮದ್ದು, ಛಾಪಿಸುವ ಯುಕ್ತಿ, ಹಡಗಿನೊಳಗೆ ದಿಕ್ಕು ತಿಳಿಸುವ ಹೋಕಾಯಂತ್ರ, ಇವೆಲ್ಲ ಮೊದಲು ಚೀನದೇಶದಲ್ಲಿ ಹುಟ್ಟಿದವೆಂದು ಹೇಳುತ್ತಾರೆ. ಈ ದೇಶದ ಕಣಿಗಳಲ್ಲಿ ಚಿನ್ನ, ಬೆಳ್ಳಿ ಮೊದಲಾದ ಬೆಲೆಯುಳ್ಳ ಲೋಹಗಳು ದೊರೆಯುತ್ತವೆ.

**ತಿಬೇತವು:**—ಹಿಮಾಲಯದ ಉಳುಕಲಿನ ಮೇಲೆ ಇರುವ ಈ ದೇಶದಲ್ಲಿ ಮೊದಲು ಸ್ವತಂತ್ರತಿಬೇತ, ಚಿನಯಿತಿಬೇತ ಎಂದು ಎರಡು ಭಾಗಗಳಿದ್ದವು. ಆದರೆ ಸ್ವತಂತ್ರತಿಬೇತವು ಈಗ ಕಾಶ್ಮೀರದ ರಾಜ್ಯಕ್ಕೆ ಸೇರಿರುತ್ತದೆ. ಚಿನಯಿತಿಬೇತಕ್ಕೂ ಕಾಶ್ಮೀರಕ್ಕೂ ನಡುವೆ ಕಾರಾಕೋರಾನೆಂಬ ಪರ್ವತವದೆ. ಈ ದೇಶದ ಭೂಮಿ ಎತ್ತರವಾದದ್ದು; ಅದರಲ್ಲಿ ಸಿಂಧು, ಬ್ರಹ್ಮಪುತ್ರ ಎಂಬ ನದಿಗಳೂ

ಸತಲಜ, ಇರಾವತಿ, ಯಾಂಗತ್ಸೀ, ಹೊಆಂಗ್‌ಹೋ ಎಂಬ ದೊಡ್ಡ ಹೊಳೆಗಳೂ ಉಗಮವಾಗಿರುತ್ತವೆ. ಸಿಂಧು-ಬ್ರಹ್ಮಪುತ್ರಗಳ ಉಗಮಗಳು ಒಂದಕ್ಕೊಂದು ಸಮೀಪವಾಗಿರುತ್ತವೆ. ಈ ನದಿಗಳು ಹಿಮಾಲಯವನ್ನು ಬಳಸಿ ಮುಂದಕ್ಕೆ ಹೋಗುವವರೆಗೆ ಒಂದು ಪಶ್ಚಿಮಕ್ಕೂ ಮತ್ತೊಂದು ಪೂರ್ವಕ್ಕೂ ಹರಿಯುತ್ತವೆ. ತಿಬೇಟದಲ್ಲಿ ಹಲವು ಸರೋವರಗಳುಂಟು. ಅವುಗಳಲ್ಲಿ ಬ್ರಹ್ಮಪುತ್ರದ ನೆರೆಯಲ್ಲಿ ತೆಂಗ್ರಿನಾರ, ಪಾಲ್ಟಿ, ಸತಲಜನದಿಯ ನೆರೆಯಲ್ಲಿ ರಾವಣಹ್ರದ, ಮಾನಸಸರೋವರ ಎಂಬ ಸರೋವರಗಳು ಬಹಳ ಪ್ರಸಿದ್ಧವುಂಟು.

ಲಾಸಾ ಎಂಬ ಮುಖ್ಯ ಪಟ್ಟಣವು ಬೌದ್ಧ ಧರ್ಮಿಗಳ ಪವಿತ್ರಸ್ಥಾನವುಂಟು. ಅಲ್ಲಿ ಆ ಜನರ **ದಲಾಯಿಲಾಮಾ** ಎಂಬ ಮುಖ್ಯ ಗುರು ಇರುತ್ತಾನೆ. ಎಲ್ಲಾ ಧರ್ಮಗಳಿಗಿಂತ ಬೌದ್ಧ ಧರ್ಮವು ಹೆಚ್ಚಿಗೆ ಹಬ್ಬಿರುತ್ತದೆ. ಚೀನ, ಜಪಾನ, ಬ್ರಹ್ಮದೇಶ, ಸಿಂಹಳದ್ವೀಪ ಮುಂತಾದ ದೇಶಗಳಲ್ಲಿ ಇದೇ ಧರ್ಮವು ನಡೆಯುತ್ತದೆ. ತಿಬೇಟವರ ನಡತೆಗಳು ತುರ್ಕಸ್ಥಾನದವರ ನಡತೆಗಳಂತೆ ಅವೆ. ಈ ದೇಶದಲ್ಲಿ ಸ್ವಲ್ಪ ಜನರು ಮಾತ್ರ ಒಕ್ಕಲತನ ಮುಂತಾದ ಉದ್ಯೋಗಗಳನ್ನು ಮಾಡುತ್ತಾರೆ. ಉಳಿದವರೆಲ್ಲರು ಕುರಿಗಳನ್ನೂ ದನಗಳನ್ನೂ ಸಾಕಿ, ಮೇವಿಗಾಗಿ ತಿರುಗುತ್ತಿರುತ್ತಾರೆ. ಇಲ್ಲಿಯ ಕುರಿಗಳ ಉಣ್ಣೆಯಿಂದ ಮೇಲಾದ ಶಾಲುಗಳು ಹುಟ್ಟುತ್ತವೆ.

**ಮಂಚೂರಿಯ:**—ಉತ್ತರಕ್ಕೆ ಅಮೂರ ನದಿ; ಪಶ್ಚಿಮಕ್ಕೆ ಮೊಂಗೋಲಿಯ; ದಕ್ಷಿಣಕ್ಕೆ ಕೋರಿಯ ಮತ್ತು ಚೀನ ದೇಶದ ದೊಡ್ಡ ಗೋಡೆ; ಪೂರ್ವಕ್ಕೆ ಪೀತಸಮುದ್ರ. ಉತ್ತರದಲ್ಲಿ ವಾಸಿಸುವ ತುರ್ಕೀ ಜನರ ಉಪದ್ರವವು ತಮಗೆ ಆಗಬಾರದೆಂದು ಚೀನೀ ಜನರು ೨೦೦೦ ವರ್ಷದ ಹಿಂದೆ ಪರ್ವತಪ್ರಾಯವಾದ ದೊಡ್ಡ ಗೋಡೆಯನ್ನು ೧೨೫೦ ಮೈಲು ಉದ್ದವಾಗಿ ಕಟ್ಟಿದರು. ಆದರೂ ಮಂಚೂರಿಯದ ತುರ್ಕೀ ಜನರು ಸನ್ ೧೬೪೪ ನೇ ವರ್ಷ ಚೀನಿಗಳನ್ನು ಗೆದ್ದು ಅವರ ರಾಜ್ಯವನ್ನು ಆಕ್ರಮಿಸಿದರು. ಸನ್ ೧೯೧೨ ರ ವರೆಗೆ ಮಂಚೂರಿಯದ ಅರಸರೇ ಚೀನದೇಶವನ್ನು ಆಳಿದರು.

ಈ ದೇಶದಲ್ಲಿ ಗುಡ್ಡಗಳೂ ವಿಸ್ತಾರವಾದ ಅಡವಿಗಳೂ ಬಹಳ, ದಕ್ಷಿಣಭಾಗದ ಭೂಮಿಯು ಬೆಳೆಯುಳ್ಳದ್ದಿರುತ್ತದೆ. ಚಳಿ ಬಹಳ, ಮಳೆಗಾಲದಲ್ಲಿ ಬರ್ಫ ಬೀಳುವದು. ನಿವಾಸಿಗಳು ಬಹುತರ ಚೀನಿಗಳೇ ಇರುವರು. ಬೌದ್ಧಧರ್ಮವು ಮುಖ್ಯವಾಗಿ ನಡೆಯುತ್ತದೆ. ಈಗಿನ ಮುಖ್ಯ ಪಟ್ಟಣ **ಕಿರಿನೋಲಾ** ದಕ್ಷಿಣದಲ್ಲಿ ಇರುತ್ತದೆ. **ಮುಕಡೆನ** ಹಳೆ ರಾಜಧಾನಿ ಉತ್ತರದಲ್ಲಿ **ನ್ಯೂಚಾಂಗ, ಪೋರ್ಟಆರ್ಥರ, ತಾಲಿಯನ್‌ವಾನ** ಮುಖ್ಯ ಬಂದರಗಳು.

ಈ ದೇಶದೊಳಗಿಂದ ರಶಿಯದವರನ್ನು ಹೊರಗೆ ಹಾಕುವದ ಕ್ಕೊಸ್ಕರ ಅವರಿಗೂ ಜಪಾನೀಗೂ ದೊಡ್ಡ ಯುದ್ಧವಾದದ್ದನ್ನು ಜಪಾನದ ವರ್ಣನೆಯಲ್ಲಿ ನೋಡು. ಪೂರ್ವ ದೇಶದಲ್ಲಿ ವಿಖ್ಯಾತವಾದ **ಪೋರ್ಟಆರ್ಥರ** ಬಂದರವು ಜಪಾನರ ವಶದಲ್ಲಿ ಇರುತ್ತದೆ.

**ಮೊಂಗೋಲಿಯು**—ಮಂಚೂರಿಯದ ಪಶ್ಚಿಮಕ್ಕಿರುತ್ತದೆ. **ಗೋಬಿ ಅಥವಾ ಶಾಮೊ** ಎಂಬ ಉಸುಬಿನ ಬೈಲು ವಿಸ್ತಾರವಾಗಿ ಹಬ್ಬಿರುವದು. ನೀರಿನ ಆಶ್ರಯವಿದ್ದಲ್ಲಿ ಮಾತ್ರ ಮೋಗಲ ಕುಲದ ಕಾಡು ಜನರು ವಾಸಿಸುವರು. ಅವರು ದನ ಕುರಿಗಳನ್ನು ಸಾಕಿ, ಅವಕ್ಕೆ ಮೇವು ಹುಡುಕುತ್ತ ಸಂಚಾರದಲ್ಲಿ ಕಾಲಕ್ಷೇಪ ಮಾಡುವರು. ಬೌದ್ಧಮತವೇ ಅವರ ಧರ್ಮವು. **ಬೈಕಾಲ** ಸರೋವರದ ದಕ್ಷಿಣದಲ್ಲಿ **ಉಗಾರ** ಎಂಬ ಮುಖ್ಯ ಪಟ್ಟಣವಿರುತ್ತದೆ. ಅಲ್ಲಿ ಚೀನ ಸರಕಾರದ ಸುಭೇದಾರನಿರುತ್ತಾನೆ. ಆಮೂರ ಮತ್ತು **ಹೋಆನಹೋ** ಹೊಳೆಗಳ ಶಾಖೆಗಳು ಕೆಲಕೆಲವು ಕಡೆಯಲ್ಲಿ ಹರಿಯುತ್ತವೆ. ಉತ್ತರ ಮೇರೆಯಲ್ಲಿ **ಮೈಮುಚ್ಚಿನ್** ಎಂಬ ಪೂರ್ವದ ವ್ಯಾಪಾರಸ್ಥಳವಿರುತ್ತದೆ. **ಗೋಬೀ** ಅರಣ್ಯವು ೧೫೦೦ ಮೈಲು ವಿಸ್ತಾರವಾಗಿರುವದು; ಬುನಾದಿಯಲ್ಲಿ ಇಲ್ಲಿ ಸಮುದ್ರವಿತ್ತೆಂದು ಹೇಳುತ್ತಾರೆ.

ಚೀನರು ಬುನಾದಿಯಿಂದ ನಡೆಯುತ್ತ ಬಂದ ಬಾದಶಾಹಿಯನ್ನು ಮುರಿದು ಬಾದಶಹನನ್ನು ತೆಗೆದು ಸನ್ ೧೯೧೨ ರಲ್ಲಿ ಪ್ರಜಾಸತ್ತಾತ್ಮಕ ರಾಜ್ಯವನ್ನು ಸ್ಥಾಪಿಸಿದರು.

## ೧೦ ಇಂಡಿಯನ್‌ಚಾಯನಾ (ಪೂರ್ವ ದ್ವೀಪಕಲ್ಪ.)

ಈ ದೊಡ್ಡ ದ್ವೀಪಕಲ್ಪವು ಚಿನಯಿರಾಜ್ಯದ ದಕ್ಷಿಣ ದಿಕ್ಕಿನಲ್ಲಿ ಹಿಂದುಸ್ತಾನದ ಪೂರ್ವಕ್ಕಿರುತ್ತದೆ. ಈ ದ್ವೀಪಕಲ್ಪಕ್ಕೂ ಹಿಂದುಸ್ತಾನಕ್ಕೂ ನಡುವೆ ಬಂಗಾಲದ ಉಪಸಾಗರವೂ ಆರಾಕಾನ ಪ್ರಾಂತದ ಉತ್ತರಕ್ಕಿರುವ ಗುಡ್ಡಗಳೂ ಉಂಟು. ಈ ದೇಶದ ಭೂಮಿ ಬೆಳೆಯುಳ್ಳದ್ದು; ದೊಡ್ಡ ದೊಡ್ಡ ಬನಗಳು ಅಸಂಖ್ಯ ಉಂಟು; ಕಣಿಗಳಲ್ಲಿ ಲೋಹಗಳು ವಿಪುಲವಾಗಿ ದೊರೆಯುತ್ತವೆ. ಇಲ್ಲಿಯ ನಿವಾಸಿಗಳು ಬುದ್ಧಿವಂತರು; ಗಂಟೆಗಳು, ಬಣ್ಣದ ಸಾಮಾನುಗಳು, ಮಣ್ಣಿನ ಪಾತ್ರೆಗಳು, ಬೆಲೆಯುಳ್ಳ ವಸ್ತ್ರಗಳು, ಕಾಜಿನಪಾತ್ರೆಗಳು, ಮೊದಲಾದ ಒಡವೆಗಳನ್ನು ಮಾಡುವದರಲ್ಲಿ ಇವರು ನಿಪುಣರಿರುತ್ತಾರೆ. ಅವರ ನಡೆನುಡಿಗಳು ಕೆಲವು ಅಂಶದಲ್ಲಿ ಹಿಂದೂ ಜನರಂತೆಯೂ ಕೆಲವು ಅಂಶದಲ್ಲಿ ಚೀನೀ ಜನರಂತೆಯೂ ಇರುತ್ತವೆ. ಈ ದ್ವೀಪಕಲ್ಪದಲ್ಲಿ ಬ್ರಹ್ಮದೇಶ, ಸೀಯಾಮ, ಮಲಾಯಾ, ಕೋಚೀನಚೀನ, ಅನಾಮ ಎಂಬ ಐದು ಭಾಗಗಳುಂಟು.

ಬ್ರಹ್ಮದೇಶ:—ಇದು ಪೂರ್ವದ್ವಿಪಕಲ್ಪದ ಪಶ್ಚಿಮಭಾಗವು. ಇರಾವತಿ, ಸಿತಾಂಗ, ಸಾಲವೇನ ಎಂಬ ಹೊಳೆಗಳು ಈ ದೇಶದಲ್ಲಿ ಹರಿದು ಮಾರ್ತಬಾನ ಎಂಬ ಆಖಾತಕ್ಕೆ ಕೂಡುತ್ತವೆ. ಈ ದೇಶದಲ್ಲಿ ತೇಗಿನ ಮರಗಳ ರಮಣೀಯವಾದ ಬನಗಳೂ ಮೇಲಾದ ಬತ್ತದ ಗದ್ದೆಗಳೂ ಇರುತ್ತವೆ. ಈ ದೇಶಕ್ಕೆ ಸೇರಿದ ಆಸಾಮ ಆರಾಕಾನ, ತೇನಾಸರಿಮ್ ಮುಂತಾದ ಪ್ರಾಂತಗಳನ್ನು ಸನ್ ೧೮೨೬ ನೆಯ ವರ್ಷದಿಂದ ೧೮೮೫ ನೆಯ ವರ್ಷದ ವರೆಗೆ ಇಂಗ್ಲಿಷ ಸರಕಾರದವರು ಒಂದರ ಹಿಂದೊಂದು ತಕ್ಕೊಂಡು ಕಡೆಗೆ ಇಡೀ ದೇಶವನ್ನು ಆಕ್ರಮಿಸಿದರು.

ಬ್ರಹ್ಮದೇಶದಲ್ಲಿ ಲೋಅರ (ಕೆಳಗಿನ) ಅಪರ (ಮೇಲಿನ) ಎಂಬೆರಡು ಭಾಗಗಳಿರುತ್ತವೆ. ಎರಡೂ ಕೂಡಿ ೧,೬೮,೦೦೦ ಚಚ್ಚೌಕ ಮೈಲು ವಿಸ್ತಾರವಾಗಿರುತ್ತವೆ. ಕೆಳಗಿನ ಬ್ರಹ್ಮದೇಶ

ದಲ್ಲಿ ಆರಾಕಾನ, ಪೇಗೂ, ತೆನಾಸರಿಂ ಎಂಬ ಮೂರು ಪ್ರಾಂತಗಳಿವೆ. ರಂಗೂನ ಮುಖ್ಯ ಬಂದರವು; ಮೋಲಮೀನ ಎರಡನೆಯ ದೊಡ್ಡ ಬಂದರವು; ಅಲ್ಲಿ ತೊಲೆಗಳ ವ್ಯಾಪಾರ ಬಹಳ ನಡಿಯುತ್ತದೆ. ಮೇಲಿನ ಬ್ರಹ್ಮದೇಶದಲ್ಲಿ ಮಂಡಲೆ ಮುಖ್ಯ ರಾಜಧಾನಿಯು. ಭಾಮೊ ಹೆಸರಾದ ವ್ಯಾಪಾರಸ್ಥಳವು. ಮೇಲಿನ ಬ್ರಹ್ಮದೇಶದ ಪೂರ್ವಕ್ಕೆ ಶಾನ ಎಂಬ ಕಾಡುಜನರ ಸಂಸ್ಥಾನಗಳಿರುತ್ತವೆ.

ಬ್ರಹ್ಮದೇಶವು ಒಬ್ಬ ಲೆಫ್ಟೆನಂಟ ಗವ್ಹರ್ನರನ ವಶದಲ್ಲುಂಟು. ಅವನ ರಾಜಧಾನಿಯಾದ ಮಂಡಲೆ ಎಂಬ ಪಟ್ಟಣವು ಇರಾವತಿಯ ಧಡದಲ್ಲಿರುತ್ತದೆ. ಆವಾ, ಅಮರಪುರ, ಮಂಚೊಬೋ ಎಂಬ ಪಟ್ಟಣಗಳು ಪೂರ್ವಕಾಲದಲ್ಲಿ ರಾಜಧಾನಿಗಳಾಗಿದ್ದವು. ಈ ದೇಶದಿಂದ ಅಕ್ಕಿ, ಉಪ್ಪು, ತೊಲೆಗಳು ಮುಂತಾದವುಗಳು ಚೀನದೇಶಕ್ಕೆ ಹೋಗುತ್ತವೆ; ಮತ್ತು ಅಲ್ಲಿಂದ ನೂಲು, ರೇಶಿಮೆ, ಉಣ್ಣೆಗಳ ವಸ್ತ್ರಗಳು ಈ ದೇಶಕ್ಕೆ ಬರುತ್ತವೆ. ಖಣಿಗಳಲ್ಲಿ ಬೆಲೆಯುಳ್ಳ ಮಾಣಿಕಗಳೂ ಕಲ್ಲೆಣ್ಣೆಯೂ ದೊರೆಯುತ್ತವೆ.

**ಸಿಯಾಮ ದೇಶವು**:— ಇದು ಬ್ರಹ್ಮದೇಶದ ಪೂರ್ವಕ್ಕಿರುತ್ತದೆ. ಮಿನಾಮ ಎಂಬ ಹೊಳೆಯು ಈ ದೇಶದಲ್ಲಿ ಹರಿದು ಸಿಯಾಮದ ಆಖಾತಕ್ಕೆ ಕೂಡುತ್ತದೆ ಈ ದೇಶವನ್ನು ಒಬ್ಬ ಅರಸನು ಆಳುತ್ತಾನೆ. ಅವನ ರಾಜಧಾನಿಯಾದ ಬಾಂಕೋಕ ಪಟ್ಟಣವು ಮಿನಾಮನದಿಯ ಧಡದಲ್ಲಿ ಇರುತ್ತದೆ. ಉತ್ತರಭಾಗದಲ್ಲಿರುವ ಲಾವೋ ಎಂಬ ದೇಶವೂ ಮಲಾಯಾ ದೇಶದೊಳಗಿನ ಕೆಲವು ಸಂಸ್ಥಾನಗಳೂ ಈ ಅರಸನ ರಾಜ್ಯಕ್ಕೆ ಸೇರಿರುತ್ತವೆ. ಈ ದೇಶದಲ್ಲಿ ಬೆಲೆಯುಳ್ಳ ರತ್ನಗಳು ದೊರೆಯುತ್ತವೆ. ಈ ದೇಶದ ವ್ಯಾಪಾರವು ಬ್ರಹ್ಮದೇಶದ ವ್ಯಾಪಾರದಂತೆ ಇರುತ್ತದೆ.

**ಮಲಾಯಾದೇಶವು**:— ಈ ದ್ವೀಪಕಲ್ಪವು ಸಿಯಾಮದ ದಕ್ಷಿಣಕ್ಕಿರುತ್ತದೆ. ಇದಕ್ಕೂ ಮುಖ್ಯದ್ವೀಪಕಲ್ಪಕ್ಕೂ ನಡುವೆ ಕ್ರಾ

ಎಂಬ ಸಂಯೋಗಭೂಮಿಯುಂಟು. ಇದಕ್ಕೂ ಸುಮಾತ್ರಾದ್ವೀಪಕ್ಕೂ ನಡುವೆ ಮಲಾಕಾ ಎಂಬ ಸಾಮುದ್ರಧುನಿಯುಂಟು. ಬಹು ಜನರು ಸಂಸ್ಥಾನಿಕರು ಈ ದೇಶವನ್ನು ಆಳುತ್ತಾರೆ; ಅವರಲ್ಲಿ ಕೆಲವರು ಸಿಯಾಮದ ಅರಸನಿಗೆ ಅಂಕಿತರಾಗಿರುತ್ತಾರೆ; ಕೆಲವರು ಸ್ವತಂತ್ರರುಂಟು; ಕೆಲವರು ಇಂಗ್ಲಿಷರಿಗೆ ಕಪ್ಪ ಕೊಡುತ್ತಾರೆ. **ಮಲಾಕಾ, ವೆಲಸ್ಲೀ** ಎಂಬ ಪ್ರಾಂತಗಳೂ, ಮಲಾಕಾ ಸಾಮುದ್ರಧುನಿಯೊಳಗಿರುವ **ಸಿಂಗಾಪೂರ, ಪಿನಾಂಗ** ಎಂಬದ್ವೀಪಗಳೂ ಇಂಗ್ಲಿಷರ ವಶದಲ್ಲುಂಟು. ಈ ದ್ವೀಪಗಳು ಹಿಂದುಸ್ತಾನಕ್ಕೂ ಚೀನಕ್ಕೂ ನಡೆಯುವ ವ್ಯಾಪಾರಕ್ಕೆ ಬಹಳ ಪ್ರಯೋಜನಕರವಾಗಿರುತ್ತವೆ. ಮಲಾಯೀ ಜನರು ಮುಸಲ್ಮಾನರು, ಇಂದಿಯನ್ ಚಾಯನಾ ದೇಶದೊಳಗಿನ ಉಳಿದ ಜನರೆಲ್ಲರು ಬೌದ್ಧಧರ್ಮಿಗಳುಂಟು.

**ಕೋಚೀನಚೀನದೇಶವು**:—ಇದು ಸಿಯಾಮದಪೂರ್ವಕ್ಕಿರುತ್ತದೆ. ಮೆಕ್ಯಾಂಗ ಅಥವಾ ಕಾಂಬೋಜ ಎಂಬ ಹೊಳೆಯು ಈ ದೇಶದಲ್ಲಿ ಹರಿಯುತ್ತದೆ. ಈ ನದಿಯು ಮುಖದ ಹತ್ತರ ಇರುವ **ಸಾಯಗಾಂವ** ಎಂಬ ಪಟ್ಟಣವೂ ನೆರೆಸೀಮೆಯೂ ಫ್ರೇಂಚರ ವಶದಲ್ಲಿರುತ್ತವೆ. ಕಾಂಬೋಜ ದೇಶದ ಅರಸನು ಫ್ರೇಂಚರಿಗೆ ಕಪ್ಪ ಕೊಡುತ್ತಾನೆ. ಉಳಿದ ದೇಶವೆಲ್ಲ ಅನಾಮದ ಅರಸನ ವಶದಲ್ಲಿ ಇರುತ್ತದೆ. ಅವನ ರಾಜಧಾನಿಯಾದ **ಹುವೆ** ಎಂಬ ದೊಡ್ಡ ಪಟ್ಟಣವು ಅದೇ ಹೆಸರಿನ ನದಿಯ ದಡದಲ್ಲಿ ಇರುತ್ತದೆ.

## ೧೧ ಸಿಂಹಳದ್ವೀಪವು (ಸಿಲೋನ).

ಈ ದೇಶದ ದ್ವೀಪವು ಹಿಂದುಸ್ತಾನದ ದಕ್ಷಿಣ ತುದಿಯ ಹತ್ತರ ಇರುತ್ತದೆ. ಇದಕ್ಕೆ ಹಿಂದೂ ಜನರು ಸಿಂಹಳದ್ವೀಪವೆಂತಲೂ, ಇಂಗ್ಲಿಷರು ಸಿಲೋನ ಎಂತಲೂ ಅನ್ನುತ್ತಾರೆ. ಇದಕ್ಕೂ ಹಿಂದುಸ್ತಾನಕ್ಕೂ ನಡುವೆ ಮನಾರದ ಆಖಾತವೂ ಪಾಲ್ಕೆಂಬ ಸಾಮುದ್ರಧುನಿಯೂ ಉಂಟು. ಮಾನಾರ, ಪಾಲ್ಕ ಇವೆರಡುಗಳ ನಡುವೆ

ಕೆಲವು ನಡುಗಡ್ಡೆಗಳೂ * ಉಸುಬಿನ ದಿನ್ನೆಗಳೂ ಕೂಡಿ ೬೦ ಮೈಲು ಉದ್ದವಾದದ್ದೊಂದು ಪೂಲಿನಂಥ ಒಂಡೆ ಇರುತ್ತದೆ. ಅದಕ್ಕೆ ಹಿಂದೂ ಜನರು ರಾಮನಸೇತುವೆಂತಲೂ, ಇತರರು ಆದಾಮನಪೂಲೆಂತಲೂ ಅನ್ನುವರು. ಈ ಸೇತುವಿನ ವರ್ಣನೆಯು ಹಿಂದೂ ಜನರ ಪುರಾಣದಲ್ಲುಂಟು.

ಸಿಂಹಳದ್ವೀಪದ ಕ್ಷೇತ್ರಫಲವು ೨೫,೩೬೪ ಚಚೌಕು ಮೈಲು ಇರುತ್ತದೆ; ಜನಸಂಖ್ಯೆ ೨೪ ಲಕ್ಷವುಂಟು. ಈ ದ್ವೀಪದ ಕೆಲವು ಭಾಗಗಳು ಸನ್ ೧೮೧೫ ನೆಯ ವರ್ಷದ ವರೆಗೆ ಡಚ್ಚರ ವಶದಲ್ಲಿಯೂ ಕೆಲವು ಫ್ರೆಂಚರ ವಶದಲ್ಲಿಯೂ ಇದ್ದವು. ಆದರೆ ಈಗ ಯಾವತ್ತು ದ್ವೀಪವು ಇಂಗ್ಲಿಷರ ವಶದಲ್ಲಿ ಇರುತ್ತದೆ. ಅಲ್ಲಿಯ ಕಾರಭಾರವನ್ನು ಗವ್ಹರ್ನರನು ಸಾಗಿಸುತ್ತಾನೆ. ಆದರೆ ಅವನು ಹಿಂದುಸ್ತಾನದ ವೈಸರಾಯನಿಗೆ ಅಂಕಿತನಾಗಿರುವದಿಲ್ಲ.

**ಪರ್ವತಗಳು**:—ಈ ದ್ವೀಪದಲ್ಲಿ ಹಲವು ಬೆಟ್ಟಗಳುಂಟು. ಅವುಗಳಲ್ಲಿ ಪೆದ್ರೊತಾಲಾಗೆಲಾ, ಇಲಿಯಾ ಎಂಬವೆರಡು ಬಹಳ ಎತ್ತರ ಉಂಟು. ಆದರೆ ಆದಾಮ್ಸಪೀಕ ಎಂಬ ಪರ್ವತವು ಹೆಚ್ಚಿಗೆ ಪ್ರಸಿದ್ಧವಾದದ್ದು. ಈ ಪರ್ವತದ ಮೇಲೆ ಬುಧ್ಧನ ಹೆಜ್ಜೆಗಳು ಮೂಡಿರುತ್ತವೆಂದು ಬೌದ್ಧಧರ್ಮದ ಗುರುಗಳು ಹೇಳುತ್ತಾರೆ.

ಈ ದ್ವೀಪದ ಮಧ್ಯಭಾಗದಲ್ಲಿಯೂ ದಕ್ಷಿಣಭಾಗದಲ್ಲಿಯೂ ಗುಡ್ಡಗಳು ಬಹಳ. ಆದರೆ ಸಮುದ್ರ ದಂಡೆಯುಲ್ಲೆಲ್ಲ ಬಹುತರ ತಗ್ಗು ನೆಲದ ಪಟ್ಟಿಯುಂಟು. ಪರ್ವತಗಳ ಮೇಲೆ ಅಡವಿಯು ಬೆಳೆದಿರುತ್ತದೆ. ಆದರೆ ಅವುಗಳ ನಡುವಿನ ಬೈಲಿನಲ್ಲಿಯೂ ಕಂದರ

---

* ಈ ನಡುಗಡ್ಡೆಗಳಲ್ಲಿ ಮಾನಾರ, ರಾಮೇಶ್ವರ ಇವೆರಡು ಗಡ್ಡೆಗಳು ದೊಡ್ಡವಿರುತ್ತವೆ. ಈ ಗಡ್ಡೆಗಳಿಗೂ ಉಸುಬಿನ ದಿನ್ನೆಗಳಿಗೂ ನಡುವೆ ಸಣ್ಣ ಸಣ್ಣ ಹಡಗುಗಳು ನಡೆಯುವಂಥ ಒತ್ತುಗಳು ಇರುತ್ತವೆ. ಪಾಂಬೇನ ಎಂಬ ಒತ್ತನ್ನು ಅಗಿಸಿ, ದೊಡ್ಡ ಹಡಗುಗಳಿಗೆ ಮಾರ್ಗಮಾಡಿ ಕೊಡುವ ವಿಚಾರವನ್ನು ಸರಕಾರದವರು ನಡಿಸಿದ್ದಾರೆ. ಹಾಗಾದರೆ ದೊಡ್ಡ ಹಡಗುಗಳು ಸಿಂಹಳದ್ವೀಪವನ್ನು ಈಗಿನಂತೆ ಸುತ್ತಿಕೊಂಡು ಹೊಗುವದು ಅವಶ್ಯವಾಗಲಿಕ್ಕಿಲ್ಲ.

ಗಳಲ್ಲಿಯೂ ಬೆಳೆಯು ಚನ್ನಾಗಿ ಬರುತ್ತದೆ. ಈ ದ್ವೀಪದ ಉತ್ತರ ಪೂರ್ವ ಭಾಗಗಳಲ್ಲಿ ಪುರಾತನ ಕಾಲದ ದೊಡ್ಡ ದೊಡ್ಡ ಹಾಳು ಕೆರೆಗಳುಂಟು. ಅವುಗಳನ್ನು ಯಾರು ಕಟ್ಟಿಸಿದರೆಂಬದು ಗೊತ್ತಾಗುವದಿಲ್ಲ. ಸಮುದ್ರದಂಡೆಯ ಭೂಮಿಯು ಬೆಳೆಯುಳ್ಳದ್ದುಂಟು; ಅಲ್ಲಿ ನೀರು ವಿಪುಲವಿರುತ್ತದೆ. ಅದರಿಂದ ಮೇಲಾದ ತೋಟಗಳಾಗಿರುತ್ತವೆ. ಆದರೆ ಹವೆಯು ಆರೋಗ್ಯಕರವಲ್ಲ. ಗುಡ್ಡದ ಸೀಮೆಯು ಹವೆಯು ನೆಟ್ಟಗಿರುತ್ತದೆ. ಅಲ್ಲಿ ಬುಂದು ಸರಸಾಗಿ ಬೆಳೆಯುವದು. ಈ ದ್ವೀಪದಲ್ಲಿ ಬಹಳ ಮಳೆಯಾಗುತ್ತದೆ; ಮಳೆಗಾಲವು ಆರು ಏಳು ತಿಂಗಳು ಇರುತ್ತದೆ.

ದಾಲಚಿನ್ನಿ, ಮೆಣಸು ಮುಂತಾದ ಮಸಾಲೆಯ ಪದಾರ್ಥಗಳೂ ತೆಂಗು ಮೊದಲಾದ ಫಲಗಳೂ ಈ ದ್ವೀಪದಲ್ಲಿ ಬಹಳ ಸರಸಾಗಿ ಬೆಳೆಯುತ್ತವೆ. ಅಕ್ಕಿ, ಹತ್ತಿ, ನೀಲಿ, ಕಬ್ಬು, ತಂಬಾಕ ಮುಂತಾದವುಗಳಾದರೂ ಒಳಿತಾಗಿ ಬೆಳೆಯುತ್ತವೆ. ಕಬ್ಬಿಣ ಮುಂತಾದ ಲೋಹಗಳೂ ವಿಶೇಷವಾಗಿ ಬೆಲೆಯುಳ್ಳ ರತ್ನಗಳೂ ಈ ದ್ವೀಪದಲ್ಲಿ ಬಹಳ ದೊರೆಯುತ್ತವೆ. ವಾಯುವ್ಯ ದಂಡೆಯಲ್ಲಿ ಸಮುದ್ರದೊಳಗೆ ಮೇಲಾದ ಮುತ್ತುಗಳು ದೊರೆಯುತ್ತವೆ. ಪಶ್ಚಿಮ ದಂಡೆಯಲ್ಲಿ ಉಪ್ಪಿನ ಕಾರಖಾನೆಗಳು ನಡೆಯುತ್ತವೆ. ಅಲ್ಲಿಂದ ಉಪ್ಪು ಹಿಂದುಸ್ತಾನಕ್ಕೆ ಬರುತ್ತದೆ. ಈ ದ್ವೀಪದಿಂದ ತೊಲೆಗಳು ಪರದೇಶಗಳಿಗೆ ಹೋಗುತ್ತವೆ.

ಈ ದ್ವೀಪದಲ್ಲಿ ಸಿಂಘಲೀಜನರು, ಹಿಂದೂ ಜನರು, ಮೂಲ ನಿವಾಸಿಗಳಾದ ಕಾಡುಜನರು, ಈ ಪ್ರಕಾರ ಮೂರು ಬಗೆಯ ನಿವಾಸಿಗಳುಂಟು. ಸಿಂಘಲೀಜನರು ಶಾಂತ ಸ್ವಭಾವದವರು; ಅವರು ಪಶ್ಚಿಮ ದಕ್ಷಿಣ ದಂಡೆಗಳಲ್ಲಿ ವಾಸಿಸುತ್ತಾರೆ. ಅವರ ಧರ್ಮ ಬೌದ್ಧಧರ್ಮವು, ಭಾಷೆಯು ಸ್ವತಂತ್ರವಾದದ್ದು. ಹಿಂದೂ ಜನರು ತಮಿಳ ಭಾಷೆಯನ್ನು ಆಡುತ್ತಾರೆ. ಅವರು ಮದ್ರಾಸ ಇಲಾಖೆಯಿಂದ ಈ ದ್ವೀಪಕ್ಕೆ ಬಂದವರು. ಈ ಜನರು ಮುಖ್ಯವಾಗಿ ಉತ್ತರಭಾಗದಲ್ಲಿ ವಾಸಿಸುತ್ತಾರೆ. ಮೂಲ ನಿವಾಸಿಗಳಾದ ಕಾಡು

ಜನರು ಗುಡ್ಡಗಳಲ್ಲಿ ಇರುತ್ತಾರೆ. ಈ ದ್ವೀಪದ ನಿವಾಸಿಗಳಲ್ಲಿ ಕೆಲವರು ಒಕ್ಕಲತನದಿಂದ ಜೀವಿಸುವರು, ಕೆಲವರು ಮೀನಹಿಡಿಯುವರು, ಕೆಲವರು ಲೋಹಗಳ ಕೆಲಸಗಳನ್ನು ಮಾಡುವರು, ಬೇರೆ ಕೆಲವರು ಹಗ್ಗಗಳನ್ನು ಹೊಸೆದು, ಇಲ್ಲವೆ ಬುಟ್ಟಿಗಳನ್ನು ಹೆಣೆದು, ಹೊಟ್ಟೆ ತುಂಬಿಕೊಳ್ಳುವರು.

ಈ ದ್ವೀಪದ ರಾಜಧಾನಿಯಾದ **ಕೋಲಂಬೊ** ಬಂದರವು ಪಶ್ಚಿಮ-ಸಮುದ್ರದ ತೀರದಲ್ಲಿ ಇರುತ್ತದೆ. ದಕ್ಷಿಣದಲ್ಲಿ **ಪಾಯಿಂಟ-ದಿ-ಗ್ಯಾಲೀ** ಎಂಬ ಮನೋಹರವಾದ ಬಂದರ ಉಂಟು. ಈ ಬಂದರಕ್ಕೆ ಮುಂಬಯಿ, ಕಲಕತ್ತೆ, ಚೀನ, ಯುರೋಪ, ಆಸ್ಟ್ರೇಲಿಯ ಮುಂತಾದವುಗಳಿಂದ ಹಡಗುಗಳು ಬರುತ್ತವೆ. ಈಶಾನ್ಯದಲ್ಲಿ ಮಹಾವಲಿಗಂಗಾ ಎಂಬ ಹೊಳೆಯ ಮುಖದ ಹತ್ತಿರ **ತ್ರಿಂಕೋಮಾಲಿ** ಎಂಬ ಬಂದರ ಉಂಟು; ಉತ್ತರದಲ್ಲಿ **ಪಾಯಿಂಟ ಪೆದ್ರೊ** ಎಂಬ ನಾಲ್ಕನೆಯ ಬಂದರವದೆ. ಮಧ್ಯಭಾಗದ ಗುಡ್ಡದ ಸೀಮೆಯಲ್ಲಿ **ಕ್ಯಾಂಡೀ** ಎಂಬದೊಂದು ಪ್ರಾಚೀನಕಾಲದ ರಾಜಧಾನಿಯುಂಟು. ಈಗ ಕೋಲಂಬೋ ಬಂದರದಿಂದ ಕ್ಯಾಂಡೀ ಪಟ್ಟಣದ ವರೆಗೆ ಉಗಿಬಂಡಿಯ ಮಾರ್ಗವನ್ನು ಮಾಡಿದ್ದಾರೆ.

## ೧೨ ಹಿಂದುಸ್ತಾನವು.

ಏಶಿಯದ ದಕ್ಷಿಣಕ್ಕಿರುವ ಮೂರು ದ್ವೀಪಕಲ್ಪಗಳಲ್ಲಿ ಹಿಂದುಸ್ತಾನವು ಎಲ್ಲಕ್ಕೂ ದೊಡ್ಡದೂ ಗೌರವವುಳ್ಳದ್ದೂ ಇರುತ್ತದೆ. ಇದರ ಉತ್ತರಧಲ್ಲಿ ಹಿಂದುಕುಶ, ಕಾರಾಕೊರಾನ, ಹಿಮಾಲಯ ಎಂಬ ಪರ್ವತಗಳಿವೆ ಅವುಗಳಾಚೆಯಲ್ಲಿ ತುರ್ಕಸ್ತಾನ, ತಿಬೇಟ ಎಂಬ ದೇಶಗಳುಂಟು. ಪಶ್ಚಿಮಕ್ಕೆ ಹಾಲಾ ಸುಲೈಮಾನ ಎಂಬ ಪರ್ವತಳೂ, ಅವುಗಳಾಚೆಯಲ್ಲಿ ಬಲೂಚಿಸ್ತಾನ, ಅಫಗಾಣಿಸ್ತಾನಗಳೂ ಇರುತ್ತವೆ. ನೈಋತ್ಯಕ್ಕೆ ಅರಬೀ ಸಮುದ್ರವೂ, ದಕ್ಷಿಣಕ್ಕೆ ಹಿಂದೀ ಮಹಾಸಾಗರವೂ, ಆಗ್ನೇಯಕ್ಕೆ ಬಂಗಾಲದ ಉಪಸಾಗರವೂ ಉಂಟು. ಪೂರ್ವಕ್ಕೆ ಆರಾಕಾನಪ್ರಾಂತದ ಗುಡ್ಡಗಳೂ

ಅವುಗಳಾಚೆಯಲ್ಲಿ ಬ್ರಹ್ಮದೇಶವೂ ಉಂಟು. ಈ ದೇಶದ ಕ್ಷೇತ್ರ ಫಲವು ೧೫,೮೨,೧೨೦ ಚಚ್ಚೌಕು ಮೈಲು ಇರುತ್ತದೆ. ಜನಸಂಖ್ಯೆ ೨೯,೪೦,೦೦,೦೦೦ ಕ್ಕಿಂತ ಹೆಚ್ಚು ಉಂಟು.

ಈ ದೇಶದ ಆಕಾರವು ತ್ರಿಕೋಣದ ಹಾಗೆ ಇರುತ್ತದೆ. ಹಿಮಾಲಯವು ಈ ತ್ರಿಕೋಣದ ಬುಡವುಂಟು. ವಿಂಧ್ಯಾದ್ರಿಯಿಂದ ಈ ತ್ರಿಕೋಣದಲ್ಲಿ ಎರಡು ದೊಡ್ಡ ಭಾಗಗಳಾಗಿವೆ. ಅವುಗಳಲ್ಲಿ ಉತ್ತರಭಾಗಕ್ಕೆ ಹಿಂದುಸ್ತಾನವೆಂತಲೂ, ದಕ್ಷಿಣದ ಭಾಗಕ್ಕೆ ದಕ್ಷಿಣವೆಂತಲೂ ಹೆಸರುಂಟು.

ಉತ್ತರ ಹಿಂದುಸ್ತಾನದಲ್ಲಿ ಅಂದರೆ ನಿಜಹಿಂದುಸ್ತಾನದಲ್ಲಿ ಸ್ವಾಭಾವಿಕವಾಗಿ ಆರು ಭಾಗಗಳಾಗಿವೆ. ೧. ಹಿಮಾಲಯದ, ಇಳುಕಲಿನ ಪ್ರದೇಶವು; ಇದರಲ್ಲಿ ಪಂಜಾಬಕ್ಕೆ ಸೇರಿದ ಕಾಶ್ಮೀರದ ಸಂಸ್ಥಾನವೂ, ನೇಪಾಳ, ಭೂತಾನ ಮುಂತಾದ ಸ್ವತಂತ್ರ ಸಂಸ್ಥಾನಗಳೂ ಬೇರೆ ಗುಡ್ಡ-ಗಾಡು ಜನರ ಸಂಸ್ಥಾನಗಳೂ ಇರುತ್ತವೆ. ೨ ಸಿಂಧು ತೀರದ ಪ್ರದೇಶವು; ಇದರಲ್ಲಿ ಪಂಜಾಬ, ಸಿಂಧ ಎಂಬ ಪ್ರಾಂತಗಳಿವೆ. ದೊಡ್ಡ ಬೈಲು; ಈ ಉಸುಬಿನ ಬೈಲಿನ ಉತ್ತರಕ್ಕೆ ಸತಲಜ ನದಿಯೂ, ಪಶ್ಚಿಮಕ್ಕೆ ಸಿಂಧ-ಪಂಜಾಬ ದೇಶಗಳೂ, ದಕ್ಷಿಣಕ್ಕೆ ಕಚ್ಛದ ರಣವೂ, ಪೂರ್ವಕ್ಕೆ ಅರವಲೀ ಪರ್ವತವೂ ಉಂಟು. ಈ ಬೈಲಿನ ಆಗ್ನೇಯಭಾಗವು ಬೆಳೆಯುಳ್ಳದ್ದು, ಅದರಲ್ಲಿ ಜೋಧಪುರ ಮೊದಲಾದ ರಜಪೂತ ಸಂಸ್ಥಾನಗಳಿರುತ್ತವೆ. ೪. ಮಧ್ಯ ಹಿಂದುಸ್ತಾನದ ಎತ್ತರ ಸೀಮೆಯು; ಇದರಲ್ಲಿ ರಾಜಸ್ತಾನದ ಕೆಲವು ಭಾಗವೂ, ಮಾಳವಾ, ಬುಂದೇಲಖಂಡ ಎಂಬ ಪ್ರಾಂತಗಳೂ ಇರುತ್ತವೆ. ೫ ಭಾಗೀರಥಿಯ ದಂಡೆಯ ಪ್ರದೇಶವು; ಇದರಲ್ಲಿ ಸಂಯುಕ್ತ ಪ್ರಾಂತವೂ ಬಂಗಾಲದ ಕೆಲವು ಭಾಗವೂ ಉಂಟು. ೬. ಭಾಗೀರಥಿ ಬ್ರಹ್ಮಪುತ್ರಗಳ ದಂಡೆಯ ಪ್ರದೇಶವು; ಇದರಲ್ಲಿ ಬಂಗಾಲದ ಮುಖ್ಯ ಭಾಗವೂ ಆಸಾಮ ಪ್ರಾಂತವೂ ಉಂಟು.

ದಕ್ಷಿಣಹಿಂದುಸ್ತಾನಅಥವಾ ದಕ್ಷಿಣ ಎಂಬ ಭಾಗದಲ್ಲಿಸ್ವಾಭಾವಿಕವಾಗಿ ನಾಲ್ಕು ವಿಭಾಗಗಳಾಗಿರುತ್ತವೆ. ೧. ನರ್ಮದಾ ತೀರದ ಪ್ರದೇಶವು; ಇದು ವಿಂಧ್ಯಾದ್ರಿ, ಸಾತಪುಡಾ, ಇವೆರಡು ಪರ್ವತಗಳ

ನಡುವೆ ಇರುತ್ತದೆ. ಇದರೊಳಗೆ ಗೊಂಡವನದ ಪ್ರದೇಶವೆಲ್ಲ ಬಹುತರವಾಗಿ ಬರುತ್ತದೆ. ೨ ನಿಜದಕ್ಷಿಣ; ಇದರೊಳಗೆ ಮಧ್ಯ ಪ್ರಾಂತದ ಕೆಲವು ಭಾಗವೂ, ಹೈದರಾಬಾದ, ವರ್‍ಹಾಡ, ಮಹಾರಾಷ್ಟ್ರ, ಕರ್ನಾಟಕ, ಇಷ್ಟೆಲ್ಲ ಪ್ರಾಂತಗಳೂ ಸಂಗ್ರಹಿಸಲ್ಪಡುತ್ತವೆ. ೩. ಪೂರ್ವಸಮುದ್ರತೀರದ ತಗ್ಗು ಪ್ರದೇಶವು; ಇದು ಪೂರ್ವ ಘಟ್ಟಕ್ಕೂ ಸಮುದ್ರಕ್ಕೂ ನಡುವಿನ ಪ್ರದೇಶವು. ೪ ಪಶ್ಚಿಮ ಸಮುದ್ರತೀರದ ತಗ್ಗುಪ್ರದೇಶವು; ಇದು ಪಶ್ಚಿಮಘಟ್ಟಕ್ಕೂ ಸಮುದ್ರಕ್ಕೂ ನಡುವಿನ ಪ್ರದೇಶವು.

ಹಿಂದುಸ್ಥಾನದ ರಾಜಕೀಯ ವಿಭಾಗಗಳು ಕೆಳಗೆ ಬರೆದಂತೆ:—

## ಬ್ರಿಟಿಶ್ ರಾಜ್ಯವು.

೧. ಮುಂಬಯಿ ಇಲಾಖೆ.
೨. ಮದ್ರಾಸ ಇಲಾಖೆ.
೩. ಅಸಾಮ.
೪. ಬಂಗಾಲ.
೫. ಹೊಸ ಪ್ರಾಂತ.
೬. ಸಂಯುಕ್ತ ಪ್ರಾಂತ ( ಆಗ್ರಾ, ಅಯೋಧ್ಯಾ ).
೭. ಪಂಜಾಬ.
೮. ಬ್ರಹ್ಮದೇಶ.
೯. ಮಧ್ಯಪ್ರಾಂತ, ವರ್‍ಹಾಡ ಸಹಿತ.
೧೦. ವಾಯುವ್ಯ ಸೀಮೆಯ ಪ್ರಾಂತ.
೧೧. ಬ್ರಿಟಿಶ್ ಬಲೂಚಿಸ್ತಾನ.
೧೨. ಅಜಮೀರ, ಮಾರವಾಡ ಪ್ರಾಂತ.
೧೩. ಕೊಡಗು ಪ್ರಾಂತ.
೧೪. ಅಂದಮಾನ, ನಿಕೋಬಾರ ದ್ವೀಪಗಳು.

## ಸ್ವದೇಶದ ಸಂಸ್ಥಾನಗಳು.

೧೫. ನೇಪಾಳ ಭೂತಾನ ಎಂಬ ಸ್ವತಂತ್ರ ಸಂಸ್ಥಾನಗಳು.
೧೬. ಹೈದರಾಬಾದ, ಮೈಸೂರು, ಕಾಶ್ಮೀರ, ಜಮ್ಮೂ ಮೊದಲಾದ ಸಂರಕ್ಷಿತ ಸಂಸ್ಥಾನಗಳೂ ಬೇರೆ ಬೇರೆ ಇಲಾಖೆಗಳಿಗೆ ಸೇರಿದ ಚಿಕ್ಕ ಚಿಕ್ಕ ಸಂಸ್ಥಾನಗಳೂ.

೧೭, ಪೋರ್ತುಗೀಜ, ಫ್ರೆಂಚರೆಂಬ ಪರದೇಶದವರ ಸಂಸ್ಥಾನಗಳು.

ಹಿಂದುಸ್ಥಾನದ ರಾಜ್ಯಕಾರಭಾರವನ್ನು ಗವರ್ನರ ಜನರಲ್ ಎಂಬ ಅಧಿಕಾರಿಯು ನಡಿಸುತ್ತಾನೆ; ಆವನಿಗೆ ವೈಸರಾಯ ಎಂಬ ಬಿರುದುಂಟು. ಅವನನ್ನು ಇಂಗ್ಲಂಡದ ಬಾದಶಹರು ನೇಮಿಸುತ್ತಾರೆ; ಅವನಿಗೆ ಕೌನ್ಸಿಲ್‌ದಾರರೆಂಬ ಸಹಾಯಕರಿರುತ್ತಾರೆ, ಮುಂಬಯಿ ಮದ್ರಾಸಗಳ ಗವರ್ನರರೂ ಅಸ್ಸಾಮ, ಬಂಗಾಲ, ಹೊಸಪ್ರಾಂತ, ಸಂಯುಕ್ತ ಪ್ರಾಂತ, ಪಂಜಾಬ, ಬ್ರಹ್ಮದೇಶ ಇವುಗಳ ಲೆಫ್ಟೆನೆಂತ ಗವರ್ನರರೂ, ಮಧ್ಯಪ್ರಾಂತ ಮೊದಲಾದ ಉಳಿದ ಪ್ರಾಂತಗಳ ಚೀಫ ಕಮೀಶನರರೂ ಸ್ವದೇಶಿ ಸಂಸ್ಥಾನಗಳಲ್ಲಿರುವ ರೆಸಿಡೆಂಟ ಹಾಗು ಪೋಲಿಟಿಕಲ್ ಏಜಂಟರೂ ಗವರ್ನರ ಜನರಲ್ಲನ ಕೈಕೆಳಗಿನವರು. ಆದರೂ ಆವರ ಕೈಕೆಳಗಿರುವ ಸೀಮೆಗಳ ಯಾವತ್ತು ಜಬಾಬದಾರಿಯು ಅವರ ಮೇಲೇ ಇರುತ್ತದೆ; ಅದರಿಂದ ಅವರು ಸ್ವತಂತ್ರದಿಂದ ತಮ್ಮ ಸೀಮೆಗಳ ಕಾರಭಾರವನ್ನು ನಡಿಸುತ್ತಾರೆ. ರೆಸಿಡೆಂಟರೂ ಪೋಲಿಟಿಕಲ್ ಏಜಂಟರೂ ಸಂಸ್ಥಾನಿಕರ ಕಾರಭಾರವನ್ನು ನಿರೀಕ್ಷಿಸುತ್ತಿರುವರು.

## ಪಟ್ಟಣಗಳು.

**ದಿಲ್ಲಿ:**—ಇದು ಯಮುನೆಯ ಧಡದಲ್ಲಿ ಇರುತ್ತದೆ. ಇದು ಮೊದಲು ಮೊಗಲ ಬಾದಶಹರ ರಾಜಧಾನಿಯಾಗಿತ್ತು. ಇ. ಸ. ೧೯೧೨ ರಿಂದ ಬ್ರಿಟಿಶ್ ಸರಕಾರದವರು ಮೊದಲಿನ ರಾಜಧಾನಿಯಾದ ಕಲಕತ್ತೆಯನ್ನು ಬಿಟ್ಟು ಮತ್ತೆ ದಿಲ್ಲಿಯನ್ನೇ ಹಿಂದುಸ್ತಾನದ ರಾಜಧಾನಿಯನ್ನಾಗಿ ಮಾಡಿದರು. ಈಗ ಗವರ್ನರ ಜನರಲ್ಲನು ಇಲ್ಲಿಯೇ ಇರುತ್ತಾನೆ.

೧. **ಮುಂಬಯಿ** ಇಲಾಖೆಯ ರಾಜಧಾನಿಯಾದ ಮುಂಬಯಿ ಪಟ್ಟಣವು ಒಂದು ಸಣ್ಣ ನಡುಗಡ್ಡೆಯಲ್ಲಿ ಇರುತ್ತದೆ. ಹಿಂದುಸ್ತಾನದಲ್ಲಿ ಈ ಪಟ್ಟಣದಷ್ಟು ದೊಡ್ಡ ಪಟ್ಟಣವು ಮತ್ತೊಂದಿಲ್ಲ. ಸಿಂಧಪ್ರಾಂತದಲ್ಲಿ **ಹೈದರಾಬಾದ, ಕರಾಚಿ** ಎಂಬ ಮುಖ್ಯ ಪಟ್ಟಣಗಳು ಸಿಂಧುನದಿಯ ದಂಡೆಯಲ್ಲಿರುತ್ತವೆ. ಗುಜರಾಥದಲ್ಲಿ

ಸಾಬರಮತಿಯ ಧಡದಲ್ಲಿ ಅಮದಾಬಾದ, ತಾಪಿಯ ಮುಖದ ಹತ್ತರ ಸುರತ ಎಂಬ ಪಟ್ಟಣಗಳುಂಟು. ಮಹಾರಾಷ್ಟ್ರದಲ್ಲಿ ಮೊದಲು ಪೇಶವೆಯವರ ರಾಜಧಾನಿಯಾಗಿದ್ದ ಪುಣೆ ಪಟ್ಟಣವೂ ಶಿವಾಜಿಯ ವಂಶದವರ ರಾಜಧಾನಿಯಾಗಿದ್ದ ಸಾತಾರೆ ಎಂಬ ಪಟ್ಟಣವೂ ಉಂಟು. ಮುಂಬಯಿ ಕರ್ನಾಟಕ (ದಕ್ಷಿಣ ಮಹಾರಾಷ್ಟ್ರದಲ್ಲಿ) ಬೆಳಗಾವಿ, ಧಾರವಾಡ, ಹುಬ್ಬಳ್ಳಿ, ವಿಜಾಪುರ ಮುಂತಾದ ದೊಡ್ಡ ಪಟ್ಟಣಗಳುಂಟು. ಮುಂಬಯಿ, ಕರಾಚಿ, ಕಾರವಾರ ಎಂಬ ಮೂರು ಮೇಲಾದ ಬಂದರಗಳುಂಟು.

೨. ಮದ್ರಾಸ ಇಲಾಖೆಯಲ್ಲಿ ಮದ್ರಾಸ ಪಟ್ಟಣವು ಮುಖ್ಯ ಉಂಟು. ತ್ರಿಚನಾಪಳ್ಳಿ ಎಂಬ ಭದ್ರವಾದ ಪಟ್ಟಣವು ಕಾವೇರಿ ತೀರದಲ್ಲಿರುತ್ತದೆ. ಇವಲ್ಲದೆ ಆರ್ಕಾಟ, ತಂಜಾವರ, ಬಳ್ಳಾರಿ, ಮಚ್ಛಲೀಪಟ್ಟಣ, ರಾಜಮಹೇಂದ್ರಿ, ಮಂಗಳೂರ, ಕಾಲಿಕತ ಮುಂತಾದ ಪಟ್ಟಣಗಳುಂಟು.

೩. ಅಸಾಮ ಪ್ರಾಂತದಲ್ಲಿ ಗೋಹಾಟಿಯು ಮುಖ್ಯ ಪಟ್ಟಣವಾಗಿದೆ.

೪. ಬಂಗಾಲದಲ್ಲಿ ಕಲಕತ್ತಾ ಇದು ಹಿಂದುಸ್ತಾನದ ಹಳೆ ರಾಜಧಾನಿಯು; ಹುಗಳಿನದಿಯ ಧಡದಲ್ಲಿರುತ್ತದೆ. ಮುರ್ಶಿದಾಬಾದ ಪಟ್ಟಣದಲ್ಲಿ ಮೇಲಾದ ಹಸ್ತಕೌಶಲ್ಯದ ಒಡವೆಗಳು ಹುಟ್ಟುತ್ತವೆ. ಇವಲ್ಲದೆ ಡಾಕಾ, ಬಾರಿಸಾಲ, ಮೈಮನಸಿಂಗ ಎಂಬ ಬೇರೆ ದೊಡ್ಡ ಪಟ್ಟಣಗಳುಂಟು.

೫. ಹೊಸಪ್ರಾಂತದಲ್ಲಿ ಬಹಾರ, ಛೋಟಾನಾಗಪುರ, ಒಡಿಸಾ ಎಂಬ ಭಾಗಗಳಿವೆ. ಬಹಾರದಲ್ಲಿ ಪಾಟಣಾ, ಮೊಂಗೀರ ಎಂಬ ಪಟ್ಟಣಗಳು ಭಾಗೀರಥಿಯ ಧಡದಲ್ಲಿರುತ್ತವೆ. ಛೋಟಾನಾಗಪುರದಲ್ಲಿ ರಾಂಚಿ, ಒಡಿಸಾದಲ್ಲಿ ಕಟಕ, ಜಗನ್ನಾಥ (ಪುರಿ) ಎಂಬ ಮುಖ್ಯ ಪಟ್ಟಣಗಳುಂಟು.

೬. ಸಂಯುಕ್ತಪ್ರಾಂತದಲ್ಲಿ ಮುಖ್ಯ ಪಟ್ಟಣವಾದ ಅಲಹಾಬಾದವು (ಪ್ರಯಾಗವು) ಗಂಗಾ-ಯಮುನೆಗಳ ಸಂಗಮದ

ಹತ್ತರ ಇರುತ್ತದೆ. ಆಗ್ರಾ ಹಳೆ ರಾಜಧಾನಿಯು; ಇಲ್ಲಿ ತಾಜ ಮಹಾಲ ಮುಂತಾದ ಮಂದಿರಗಳು ಬಹು ರಮಣೀಯವುಂಟು. ಗೋಮತಿಯ ಧಡದಲ್ಲಿ ಲಖನೌ ಅಯೋಧ್ಯಾಪ್ರಾಂತದ ಹಳೆ ರಾಜಧಾನಿಯು; ಫೈಜಾಬಾದ ಎರಡನೆಯ ಪಟ್ಟಣವು; ಅದರ ಪೂರ್ವಕ್ಕೆ ಬಹು ಪುರಾತನ ಕಾಲದ್ದಾದ ಅಯೋಧ್ಯಾ ಪಟ್ಟಣವು ಇರುತ್ತದೆ. ಅಲ್ಲಿ ಶ್ರೀರಾಮನು ಹುಟ್ಟಿದನು. ಇವಲ್ಲದೆ ಯಮುನೆಯ ಧಡದಲ್ಲಿ ಮಥುರೆ, ಕಾಲ್ಪೀ, ಇಟಾವಾ ಮುಂತಾದ ಪಟ್ಟಣಗಳೂ, ಭಾಗೀರಥಿಯ ಧಡದಲ್ಲಿ ಫತ್ತೇಗಡ, ಕಾನಪುರ, ಮಿರಜಾಪುರ, ಬನಾರಸ (ಕಾಶಿ), ಗಾಜೀಪುರ, ಕನೋಜ, ಝಸಿ, ಮುಂತಾದವುಗಳೂ ಉಂಟು.

೭. ಪಂಜಾಬ ಇಲಾಖೆಯ ರಾಜಧಾನಿಯಾದ ಲಾಹೊರಾ ಪಟ್ಟಣವು ರವಿಯ ಧಡದಲ್ಲಿರುತ್ತದೆ. ಅಮೃತಸರ ಶೀಕ ಜನರ ಪವಿತ್ರಸ್ಥಳವು, ಮುಲ್ತಾನ ಪಟ್ಟಣವು ಚಿನಾಬ ನದಿಯ ಧಡದಲ್ಲಿರುತ್ತದೆ. ದಿಲ್ಲಿಯ ಉತ್ತರಕ್ಕೆ ಪಾನಿಪತ ಎಂಬ ಪ್ರಖ್ಯಾತವಾದ ರಣಭೂಮಿಯುಂಟು. ಇವಲ್ಲದೆ ಲುಧಿಯಾನಾ, ಫಿರೋಜಪುರ, ಅಂಬಾಲಾ, ರಾವಳಪಿಂಡಿ ಮುಂತಾದ ಪಟ್ಟಣಗಳಿವೆ.

೮. ಬ್ರಹ್ಮದೇಶದಲ್ಲಿ ಪೂರ್ವದ ಬ್ರಹ್ಮ ಅರಸರ ರಾಜಧಾನಿಯಾದ ಮಂಡಾಲೆ ಪಟ್ಟಣದಲ್ಲಿ ಲೆಫ್ಟನೆಂಟ ಗವರ್ನರನಿರುತ್ತಾನೆ. ರಂಗೂನವು ದೊಡ್ಡ ಬಂದರವು.

೯ ವರ್‍ಹಾಡ ಸಹಿತ ಮಧ್ಯಪ್ರಾಂತದಲ್ಲಿ ನಾಗಪುರ ಮುಖ್ಯ ಪಟ್ಟಣವು. ಹಿಂಗಣಘಾಟ ಅರಳೆಯ ವ್ಯಾಪಾರಸ್ಥಳವು. ಬೇರೆ ಪಟ್ಟಣಗಳು ಸಾಗರ, ಜಬಲಪುರ, ರಾಯಪುರ, ಚಾಂದಾ, ಅಕೋಲಾ, ಉಮರಾವತಿ, ಬೇದರ ಮುಂತಾದವುಗಳುಂಟು.

೧೦ ವಾಯವ್ಯ ಸೀಮೆಯ ಪ್ರಾಂತದಲ್ಲಿ ಖೈಬರ ಘಟ್ಟದ ಅಡಿಯ ಹತ್ತರ ಪೇಶಾವರವು ಮುಖ್ಯ ಪಟ್ಟಣವಾಗಿದೆ. ಅಲ್ಲಿ ಬ್ರಿಟಿಶ್ ಸರಕಾರದ ದೊಡ್ಡ ಸೈನ್ಯವು ಇರುತ್ತದೆ.

೧೧. ಬ್ರಿಟಿಶ್ ಬಲುಚಿಸ್ತಾನ ಇದನ್ನು ಬಲುಚಿಸ್ತಾನದ ವರ್ಣನೆಯಲ್ಲಿ ನೋಡು.

೧೨. ಅಜಮೀರ-ಮಾರವಾಡ ಎಂಬ ಪ್ರಾಂತವು ರಾಜಸ್ತಾನದ ಮಧ್ಯದಲ್ಲಿದ್ದು ಒಬ್ಬ ಚೀಫಕಮಿಶನರನ ಅಧಿಕಾರಕ್ಕೆ ಒಳಗಾಗಿದೆ. ಮುಖ್ಯ ಪಟ್ಟಣವು ಅಜಮೀರ.

೧೩. ಕೊಡಗುಪ್ರಾಂತದಲ್ಲಿ ಮಡಿಕೇರಿ ಮುಖ್ಯ ಪಟ್ಟಣವು.

೧೪. ಅಂದಮಾನ, ನಿಕೊಬಾರ, ದ್ವೀಪಗಳಲ್ಲಿ ಪೋರ್ಟಬ್ಲೆಅರ ಎಂಬ ಬಂದರವು ಮುಖ್ಯ ಸ್ಥಳವಾಗಿದೆ.

೧೫. ನೇಪಾಳ, ಭೂತಾನಗಳ ರಾಜಧಾನಿಗಳು ಕ್ರಮವಾಗಿ ಕಾಟಮಾಂಡೂ, ತಾಸಿಸದನ ಎಂಬವುಗಳಿರುತ್ತವೆ.

೧೬. ( ಅ ) ನಿಜಾಮನ ರಾಜ್ಯದಲ್ಲಿ ಹೈದರಾಬಾದ ಮುಖ್ಯ ಪಟ್ಟಣವು; ಗೋವಳಕೊಂಡ ಅದೇ ಹೆಸರಿನ ರಾಜ್ಯದ ಹಳೇ ರಾಜಧಾನಿಯು. ಇವಲ್ಲದೆ ಔರಂಗಾಬಾದ, ದೌಲತಾಬಾದ, ಎಲಿಚಪುರ ಮುಂತಾದ ಪಟ್ಟಣಗಳುಂಟು.

( ಬ ) ಮೈಸೂರ ಪ್ರಾಂತದಲ್ಲಿ:— ಮೈಸೂರು ಈಗಿನ ರಾಜಧಾನಿಯು; ಶ್ರೀರಂಗಪಟ್ಟಣ ಹಳೆ ರಾಜಧಾನಿಯು. ಬೆಂಗಳೂರು ರೆಸಿಡೆಂಟನಿರುವ ಸ್ಥಳವು.

( ಕ ) ಕಾಶ್ಮಿರ-ಜುಮ್ಮಾ ಸಂಸ್ಥಾನದ ರಾಜಧಾನಿ ಶ್ರೀನಗರವು. ಜುಮ್ಮಾ ಎಂಬದು ಎರಡನೆಯ ದೊಡ್ಡಪಟ್ಟಣವು.

( ಡ ) ಮಧ್ಯಹಿಂದುಸ್ಥಾನದಲ್ಲಿ ಗ್ವಾಲ್ಹೇರ ಸಿಂದ್ಯನ ರಾಜಧಾನಿಯು; ಇಂದೂರ ಹೋಳಕರನ ರಾಜಧಾನಿಯು. ಬೋಪಾಳ ಬೇಗಮ್ಮನ ರಾಜಧಾನಿಯು; ಮಹೂ, ನಿಮುಚ ಇವೆರಡು ಪಟ್ಟಣಗಳಲ್ಲಿ ಇಂಗ್ಲಿಷ ಸರಕಾರದವರ ದಂಡು ಇರುತ್ತದೆ. ಉಜ್ಜನಿ ಹಳೆ ರಾಜಧಾನಿಯು.

( ಇ ) ರಾಜಸ್ತಾನದಲ್ಲಿ ಉದೇಪುರ, ಜೋಧಪುರ, ಜಯಪುರ, ಭರತಪುರ ಮುಂತಾದ ರಜಪೂತ ಸಂಸ್ಥಾನಿಕರ ರಾಜಧಾನಿಗಳಾದ ಪಟ್ಟಣಗಳುಂಟು.

೧೭. ಫ್ರೆಂಚರ ಸಂಸ್ಥಾನದಲ್ಲಿ ಚಂದ್ರನಗರ, ಪುದುಚೆರಿ (ಪಾಂಡಿಚರಿ) ಯಾನಾನ, ಕಾರಿಕಲ್ಲು, ಮಾಹಿ ಎಂಬ ಪಟ್ಟಣಗಳುಂಟು. ಪೋರ್ತುಗೀಜರ ರಾಜಧಾನಿ ಗೋವಾ ಪಟ್ಟಣವು- ಪಶ್ಚಿಮಸಮುದ್ರತೀರದಲ್ಲಿ ಇರುತ್ತದೆ.

---

## ೩ ನೆಯ ಭಾಗ.

## ಯುರೋಪ ಖಂಡವು.

ಯುರೋಪದ ಉತ್ತರಕ್ಕೆ ಉತ್ತರಮಹಾಸಾಗರ; ಪಶ್ಚಿಮಕ್ಕೆ ಅತ್‌ಲಾಂತಿಕ ಮಹಾಸಾಗರ; ದಕ್ಷಿಣಕ್ಕೆ ಭೂಮಧ್ಯಸಮುದ್ರ, ಆರ್ಕಿಪೆಲಾಗೋ, ಮಾರ್ಮೊರಾ ಸಮುದ್ರ, ಕಪ್ಪು ಸಮುದ್ರ, ಕಾಕೇಶಸಪರ್ವತ; ಪೂರ್ವಕ್ಕೆ ಕಾಸ್ಪಿಯನ್ ಸಮುದ್ರ, ಉರಾಲ್ ನದಿ, ಉರಲ್‌ಪರ್ವತ ಈ ಪ್ರಕಾರ ಮೇರೆಗಳುಂಟು.

ಏಶಿಯ—ಯುರೋಪ ಖಂಡಗಳು ಒಂದಕ್ಕೊಂದು ಹೊಂದಿ ಇರುತ್ತವೆ. ಯುರೋಪಕ್ಕೂ ಆಫ್ರಿಕಕ್ಕೂ ನಡುವೆ ಭೂಮಧ್ಯ ಸಮುದ್ರವುಂಟು. ಯುರೋಪಕ್ಕೂ ಅಮೇರಿಕಕ್ಕೂ ನಡುವೆ ಅತ್ ಲಾಂತಿಕ ಮಹಾಸಾಗರವುಂಟು.

ಯುರೋಪದಲ್ಲಿ ೨೦ ರಾಜ್ಯಗಳುಂಟು. ಅವುಗಳ ಹೆಸರುಗಳು:- ೧ ಗ್ರೇತಬ್ರಿತನ್, ಆಯರ್ಲಂಡ ಸಹಿತ; ೨. ಫ್ರಾನ್ಸ; ೩. ಸ್ಪೇನ; ೪. ಪೋರ್ತುಗಾಲ; ೫. ಬೆಲಜಮ್; ೬. ಹಾಲಂಡ ಅಥವಾ ನೇದರ್ಲಂಡ; ೭. ದೇನ್ಮಾರ್ಕ; ೮. ಸ್ವೀದನ; ೯. ನಾರ್ವೆ; ೧೦. ರಶಿಯ; ೧೧. ಜರ್ಮನಿ; ೧೨. ಸ್ವಿತ್ಸರ್ಲಂಡ; ೧೩. ಇತಾಲಿ; ೧೪. ಆಸ್ಟ್ರಿಯ, ಹಂಗರಿ ಸಹಿತ; ೧೫. ರೂಮಾನಿಯಾ; ೧೬. ಸರ್ವಿಯಾ; ೧೭. ಮಾಂತಿನಿಗ್ರೋ; ೧೮. ಬಲ್ಗೇರಿಯಾ ೧೯. ತುರ್ಕದೇಶ; ೨೦. ಗ್ರೀಸ.

**ಸಮುದ್ರಗಳು:—** ೧. ಶ್ವೇತಸಮುದ್ರವು ರಶಿಯದ ಉತ್ತರಕ್ಕಿರುತ್ತದೆ; ೨ ಬಾಲ್‌ತಿಕ್ ಸಮುದ್ರವು ಸ್ವೀಡನದ ಪೂರ್ವಕ್ಕೂ ಜರ್ಮನಿ--ರಶಿಯಗಳ ಪಶ್ಚಿಮಕ್ಕೂ ಇರುತ್ತದೆ; ೩. ಜರ್ಮನ

( ಉತ್ತರ ) ಸಮುದ್ರವು ಇಂಗ್ಲಿಂಡಕ್ಕೂ ಜರ್ಮನಿ-ಡೆನ್ಮಾರ್ಕಗಳಿಗೂ ನಡುವೆ ಇರುತ್ತದೆ; ೪. ಭೂಮಧ್ಯ ಸಮುದ್ರವು ಯುರೋಪಕ್ಕೂ ಆಫ್ರಿಕಕ್ಕೂ ನಡುವೆ ಇರುತ್ತದೆ; ೫. ಆದ್ರಿಯಾತಿಕಸಮುದ್ರವು ಇತಾಲಿಗೂ ತುರ್ಕಿಲದೇಶಕ್ಕೂ ನಡುವೆ ಭೂಮಧ್ಯಸಮುದ್ರದ ಭಾಗವು; ೬. ಆರ್ಕಿಪೆಲಾಗೋ ಗ್ರೀಸಕ್ಕೂ ಏಶಿಯದೊಳಗಿನ ತುರ್ಕಿಲದೇಶಕ್ಕೂ ನಡುವೆ ಇರುತ್ತದೆ; ೭. ಮಾರ್ಮೊರಾ ಸಮುದ್ರವು ಯುರೋಪದೊಳಗಿನ ತುರ್ಕಿಲದೇಶಕ್ಕೂ ಏಶಿಯ ದೊಳಗಿನ ತುರ್ಕಿಲದೇಶಕ್ಕೂ ನಡುವೆ; ಇರುತ್ತದೆ. ೮. ಕಪ್ಪು (ತುರ್ಕಿ) ಸಮುದ್ರವು ರಶಿಯಕ್ಕೂ ಏಶಿಯದೊಳಗಿನ ತುರ್ಕಿಲದೇಶಕ್ಕೂ ನಡುವೆ ಇರುತ್ತದೆ; ೯. ಆಝೋವ್ ಸಮುದ್ರವು ರಶಿಯದ ದಕ್ಷಿಣಕ್ಕಿರುತ್ತದೆ; ೧೦. ಆಯರಿಶ್ ಸಮುದ್ರ, ಉತ್ತರ ಜಲಸಂದು, ಸೆಂಟ ಜಾರ್ಜ ಜಲಸಂದು, ಈ ಮೂರು ಇಂಗ್ಲಂಡಕ್ಕೂ ಆಯರ್ಲಂಡಕ್ಕೂ ನಡುವೆ ಇರುತ್ತವೆ; ೧೧. ಬ್ರಿತಿಶ್ ಚಾನಲ್ ( ಇಂಗ್ಲಿಷ ಕೊಲ್ಲೆ ) ಇಂಗ್ಲಂಡಕ್ಕೂ ಫ್ರಾನ್ಸಕ್ಕೂ ನಡುವೆ ಇರುತ್ತದೆ.

ಧರ್ಮವೂ ರಾಜ್ಯನೀತಿಯೂ:—ಯುರೋಪದಲ್ಲಿ ತುರ್ಕಿದೇಶದಲ್ಲಿ ಮಾತ್ರ ಮುಸಲ್ಮಾನ ಧರ್ಮವು ನಡೆಯುತ್ತದೆ. ಉಳಿದ ಕಡೆಯಲ್ಲೆಲ್ಲ ಕ್ರಿಸ್ತೀ ಧರ್ಮವು ನಡೆಯುತ್ತದೆ. ಕ್ರಿಸ್ತೀಧರ್ಮದಲ್ಲಿ ಪ್ರೊತೆಸ್ತಂತ, ರೋಮನ್ ಕ್ಯಾಥಲಿಕ್, ಗ್ರೀಕ ಚರ್ಚ ಎಂಬ ಮೂರು ಮತಗಳುಂಟು. ಗ್ರೀಕ ಮತವು ಗ್ರೀಸದೇಶದಲ್ಲಿಯೂ ರಶಿಯಾದಲ್ಲಿಯೂ ರೂಮಾನಿಯಾ ಸರ್ವಿಯಾ ಮೊಂತೆನೆಗ್ರೋ ಎಂಬ ಸಂಸ್ಥಾನಗಳಲ್ಲಿಯೂ ನಡೆಯುತ್ತದೆ. ತುರ್ಕಿಲದೇಶದಲ್ಲಿ ಸುಮಾರು ೩ ದಷ್ಟು ಜನರು ಇದೇ ಮತದವರುಂಟು. ಗ್ರೇತಬ್ರಿತನ್, ಹಾಲಂಡ, ಜರ್ಮನಿ, ದೆನ್ಮಾರ್ಕ, ಸ್ವೀಡನ್, ನಾರ್ವೆ, ಸ್ವಿತ್ಸರ್ಲಂಡ ಈ ದೇಶದಲ್ಲಿ ಪ್ರೊತೆಸ್ತಂತ ಮತವು ನಡೆಯುತದೆ. ಉಳಿದ ಎಲ್ಲ ದೇಶಗಳಲ್ಲಿ ಕ್ಯಾಥಲಿಕ್ ಮತವು ನಡೆಯುತ್ತದೆ. ಫ್ರಾನ್ಸದಲ್ಲಿಯೂ ಸ್ವಿತ್ಸರಲಂಡದಲ್ಲಿಯೂ ಪ್ರಜೆಗಳಿಂದ ನೇಮಿಸಲ್ಪಟ್ಟ ಜನರು ರಾಜ್ಯಕಾರಭಾರ ನಡಿಸುತ್ತಾರೆ. ಪೋರ್ತುಗಾಲ

ದಲ್ಲಿ ಹೊಸದಾಗಿ ಈ ತರದ ವ್ಯವಸ್ಥೆಯಾಗಿದೆ. ಉಳಿದ ಯಾವತ್ತು ರಾಜ್ಯಗಳಲ್ಲಿ ಅರಸರು ಪ್ರಜೆಗಳ ಸಮ್ಮತಿಯಿಂದ ಕಾಯಿದೆಗಳನ್ನು ಮಾಡಿ ಕಾರಭಾರ ನಡಿಸುತ್ತಾರೆ, ರಶಿಯಾದಲ್ಲಿ ಪ್ರಜಾ ಸಭೆಯು ಒಳಗಡೆಯಲ್ಲಿ ಆಗಿರುತ್ತದೆ. ತುರ್ಕಿದೇಶದಲ್ಲಿ ಸನ್ ೧೯೦೮ ರಲ್ಲಿ ಪ್ರಜಾಸಭೆ ಸ್ಥಾಪನವಾಯಿತು.

## ೧. ಗ್ರೇತಬ್ರಿತನ್, ಆಯರ್ಲಂದ ಸಹಿತ್ಯ.

ಈ ಸಂಯುಕ್ತ ರಾಜ್ಯವು ಜಾರ್ಜಬಾದಶಹರವರದುಂಟು. ಇಂಗ್ಲಂಡ ಸ್ಕಾತ್‌ಲಂದಗಳು ಕೂಡಿ ಗ್ರೇತಬ್ರಿತನ್ ಎಂಬ ದೊಡ್ಡ ದ್ವೀಪವಾಗಿರುತ್ತದೆ; ಅದರ ಪಶ್ಚಿಮಕ್ಕೆ ಆಯರ್ಲಂದವು ಬೇರೆ ದ್ವೀಪವಿರುತ್ತದೆ. ಇವೆರಡೂ ದ್ವೀಪಗಳು ಜರ್ಮನ್ ಸಮುದ್ರದ ಪಶ್ಚಿಮಕ್ಕಿರುತ್ತವೆ. ಇವುಗಳ ಪಶ್ಚಿಮಕ್ಕೆ ಅತ್‌ಲಾಂತಿಕ ಮಹಾಸಾಗರವದೆ.

## ೧ ಇಂಗ್ಲಂಡವು.

ಇಂಗ್ಲಂಡದಲ್ಲಿ ಇಂಗ್ಲಂಡವೆಂತಲೂ ವೇಲ್ಸೆಂತಲೂ ಎರಡು ಭಾಗಗಳುಂಟು. ಇಂಗ್ಲಂಡದಲ್ಲಿ ೪೦ ಪರಗಣೆಗಳಿರುತ್ತವೆ. ವೇಲ್ಸ ದಲ್ಲಿ ೧೨ ಉಂಟು. ಈ ಪರಗಣೆಗಳಿಗೆ ಕೌಂತಿ ಅಥವಾ ಶಾಯರ ಎಂದು ಹೆಸರುಂಟು.

**ಇಂಗ್ಲಂಡದ ಮುಖ್ಯ ಪಟ್ಟಣಗಳು:**—ತೇಮ್ಸ ನದಿಯ ದಡದಲ್ಲಿ **ಲಂಡನ್** ರಾಜಧಾನಿಯುಂಟು; ಈ ಪಟ್ಟಣವು ಭೂಮಿಯಲ್ಲಿ ಎಲ್ಲಕ್ಕೂ ದೊಡ್ಡದಿರುತ್ತದೆ. ಇಲ್ಲಿ ಜಾರ್ಜ ಬಾದಶಹರವರು ವಾಸಿಸುತ್ತಾರೆ; ಪಾರ್ಲಿಮೆಂತೆಂಬ ದೊಡ್ಡ ಸಭೆಯೂ ಇರುತ್ತದೆ. ಈ ಪಟ್ಟಣದಲ್ಲಿ ಭೂಮಿಯ ಮೇಲಿನ ಯಾವತ್ತು ರಾಷ್ಟ್ರಗಳಿಂದ ಬಂದ ಜನರನ್ನು ನೋಡಬಹುದು. ಮರ್ಸಿನದಿಯ ದಡದಲ್ಲಿ **ಲಿವರ್ಪೂಲ**ಲೆಂಬ ದೊಡ್ಡ ಬಂದರವಿರುತ್ತದೆ. **ಮಾಂಚೆಸ್ತರ** ಪಟ್ಟಣದ ನೂಲಿನ ವಸ್ತ್ರಗಳ ಕಾರಖಾನೆಗಳು ಬಹಳ ಪ್ರಸಿದ್ಧ ಉಂಟು. ತೈನನದಿಯ ದಡದಲ್ಲಿ **ನ್ಯೂಕ್ಯಾಸಲ್ಲೆಂ**ಬ ಪಟ್ಟಣದ ನೆರೆಯಲ್ಲಿ ಇದ್ದಲಿಯ ದೊಡ್ಡ ದೊಡ್ಡ ಕಣಿಗಳಿರುತ್ತವೆ.

ಬರ್ಮಿಂಗ್ಹಮ್, ಶೇಫೀಲ್ಡ ಇವೆರಡು ಪಟ್ಟಣಗಳಲ್ಲಿ ಉಕ್ಕು ಕಬ್ಬಿಣಗಳ ಯಂತ್ರಾದಿಗಳು ಬಹಳ ಹುಟ್ಟುತ್ತವೆ. ನಾಟಿಂಗಮ್ ಎಂಬಲ್ಲಿ ಕಾಲುಚೀಲು ಮುಂತಾದ ಹೆಣಿಕೆಯ ವಸ್ತ್ರಗಳು ಆಗುತ್ತವೆ. ಹಲ್, ಬ್ರಿಸ್ತಲ್ ಎಂಬವೆರಡು ದೊಡ್ಡ ಬಂದರಗಳುಂಟು. ಅಕ್ಸಫೊರ್ಡ, ಕೆಂಬ್ರಿಜ್ಜ ಪಟ್ಣಣಗಳಲ್ಲಿ ಪ್ರಖ್ಯಾತವಾದ ವಿದ್ಯಾಲಯಗಳುಂಟು. ಕಾಂತರ್ಬರಿ, ಯಾರ್ಕ ಎಂಬೆರಡು ಪಟ್ಟಣಗಳಲ್ಲಿಮುಖ್ಯ ಧರ್ಮಾಧಿಕಾರಿಗಳಿರುತ್ತಾರೆ. ಪೊರ್ತಸ್‌ಮೌಥ, ಪ್ಲಿಮೌಥ ಇವೆರಡು ಬ್ರಿತಿಶ್ ಹಡಗುಪಡೆಯ ಮುಖ್ಯ ಠಾಣ್ಯಗಳುಂಟು. ಇವಲ್ಲದೆ ಡೋವರ, ಸೌಥಮ್‌ತನ್, ಬ್ರೈತನ್, ವುಲ್ವರಹಾಮ್ ತನ್, ಬ್ರಾದಫರ್ಡ, ಕಾರ್ಲಾಯಿಲ್, ಸಂದರ್ಲಂದ ಮುಂತಾದ ಪ್ರಸಿದ್ಧ ಪಟ್ಟಣಗಳುಂಟು.

**ವೇಲ್ಸದೊಳಗಿನ ಮುಖ್ಯ ಪಟ್ಟಣಗಳುಃ**—ಕಾರ್ದಿಫ, ಸ್ವಾನಸಿ ಇವೆರಡು ಮುಖ್ಯ ಬಂದರಗಳುಂಟು. ಮರ್ಥಿರತಿದ್ವಿಲ್ ಎಂಬ ಪಟ್ಟಣವು ಎಲ್ಲಕ್ಕೂ ದೊಡ್ಡದುಂಟು. ಮಿಲ್‌ಫರ್ಡಹೇವನ್ ಎಂಬ ಬೇರೊಂದು ಬಂದರವು ಪ್ರಸಿದ್ಧವದೆ; ಈ ಬಂದರವು ಇಂಗ್ಲಿಷ ಹಡಗುಪಡೆಯನ್ನೆಲ್ಲ ಸುರಕ್ಷಿತವಾಗಿ ಇಡಲಿಕ್ಕೆ ಬರುವಷ್ಟು ದೊಡ್ಡದಿರುತ್ತದೆ.

**ಪರ್ವತಗಳುಃ**—ಚೆವಿಯೆತ್ ಎಂಬ ಗುಡ್ಡವು ಇಂಗ್ಲಂಡಕ್ಕೂ ಸ್ಕಾತಲಂದಕ್ಕೂ ನಡುವೆ ಇರುತ್ತದೆ. ಫೆಸ್ಕಾಲ್ ಎಂಬ ಗುಡ್ಡವು ಕಂಬರ್ಲಂದ ಪ್ರಾಂತದಲ್ಲಿರುತ್ತದೆ. ವೇಲ್ಸದಲ್ಲಿಸ್ನೋದನ್ ಎಂಬ ಗುಡ್ಡವದೆ.

**ಹೊಳೆಗಳುಃ**—ತೇಮ್ಸನದಿಯು ಇಂಗ್ಲಂಡದ ದಕ್ಷಿಣಭಾಗದಲ್ಲಿ ಪೂರ್ವಕ್ಕೆ ಹರಿದು ಜರ್ಮನ್‌ಸಮುದ್ರಕ್ಕೆ ಕೂಡುತ್ತದೆ. ಇದರ ಥಡದಲ್ಲಿ ಲಂಡನ್ ಪಟ್ಟಣ ಉಂಟು. ಸೆವರ್ನ್ ಎಂಬ ನದಿಯು ಬ್ರಿಸ್ತಲ್ ಕೊಲ್ಲಿಗೆ ಕೂಡುತ್ತದೆ. ಮರ್ಸಿಹೊಳೆಯು ಆಯರಿಶ್‌ಸಮುದ್ರಕ್ಕೆ ಕೂಡುತ್ತದೆ, ಇದರ ಥಡದಲ್ಲಿ ಲಿವರ್ಪೂಲ

ಪಟ್ಟಣವಿರುತ್ತದೆ. ಇವಲ್ಲದೆ ತ್ರೈನ, ತ್ರೆಂತ, ಹಂಬರ, ಊಜ, ದೀ, ವಾಯ್ ಮುಂತಾದ ಸಣ್ಣ ಹೊಳೆಗಳುಂಟು.

ಆಖಾತಗಳುಃ—ಸಾಲ್ವೇಫರ್ಥ, ಬ್ರಿಸ್ತಲ್‌ಚಾನಲ್, ಕಾರ್ದಿಗನ್‌ಬೇ, ಮೋರಕಂಬೇ, ವಾಶ ಎಂಬ ಮುಖ್ಯ ಆಖಾತಗಳುಂಟು.

ಸಾಮುದ್ರಧುನಿಗಳುಃ—ಮಿನಾಯ್ ಎಂಬ ಸಾಮುದ್ರಧುನಿಯು ಕರ್ನಾರ್ವನ್, ಅಂಗಲಸಿ, ಇವೆರಡುಗಳ ನಡುವೆ ಇರುತ್ತದೆ. ಡೋವರದ ಸಾಮುದ್ರಧುನಿಯು ಇಂಗ್ಲೀಷ ಕೊಲ್ಲೆಯನ್ನು ಜರ್ಮನ್‌ಸಮುದ್ರಕ್ಕೆ ಕೂಡಿಸುತ್ತದೆ.

ಭೂಶಿರಗಳುಃ—ಲಾಂಡ್ಸಎಂದ ಎಂಬ ಭೂಶಿರವು ಇಂಗ್ಲಂಡದ ಪಶ್ಚಿಮದಲ್ಲಿರುತ್ತದೆ; ಲಿಜರ್ದ, ಸ್ತಾರ್ತ, ಬೀಚೀಹೆದ್ ಎಂಬ ಭೂಶಿರಗಳು ಇಂಗ್ಲಂಡದ ದಕ್ಷಿಣದಲ್ಲಿರುತ್ತವೆ. ಸ್ಪರ್ನಹೆದ್, ಪ್ಲಾಂಬರೋಹೆದ್ ಇವೆರಡು ಪೂರ್ವದಂಡೆಯಲ್ಲಿರುತ್ತವೆ. ಇವಲ್ಲದೆ ಹೋಲೀಹೆದ್ ಮುಂತಾದ ಸಣ್ಣ ಭೂಶಿರಗಳು ಹಲವುಂಟು.

ಸರೋವರಗಳುಃ—ಡರ್ವಂತವಾತರ್, ಅಲ್ಸವಾತರ್, ವಿಂಡರಮಿೂರ ಎಂಬ ಸರೋವರಗಳು ಪ್ರಸಿದ್ಧವುಂಟು.

ದ್ವೀಪಗಳುಃ—ಅಯರಿಶ್ ಸಮುದ್ರದಲ್ಲಿ ಮ್ಯಾನ್, ಅಂಗಲಸಿ, ವೈತ ಎಂಬ ದ್ವೀಪಗಳೂ, ಇಂಗ್ಲಿಷ ಕೊಲ್ಲೆಯಲ್ಲಿ ಜರ್ಸಿ, ಗರ್ನಜೀ, ಆಲ್ಡರ್ನೀ, ಸಾರ್ಕ ಎಂಬ ದ್ವೀಪಗಳೂ ಮುಖ್ಯವುಂಟು.

ವ್ಯಾಪಾರದ ಜೀನಸುಗಳುಃ—ತವರ, ಕಲ್ಲಿದ್ದಲಿ, ನೂಲು, ಉಣ್ಣೆಗಳ ವಸ್ತ್ರಗಳು, ಕಬ್ಬಿಣ-ಉಕ್ಕುಗಳ, ಸಾಮಾನುಗಳು, ಕಾಜು ಕಾಗದ, ಯಂತ್ರ ಮುಂತಾದವುಗಳು ಇಲ್ಲಿಂದ ಪರಸ್ಥಳಕ್ಕೆ ಹೋಗುತ್ತವೆ.

## ೨. ಸ್ಕಾತ್‌ಲಂದವು.

ಸ್ಕಾತ್‌ಲಂದವು ಇಂಗ್ಲಂಡದ ಉತ್ತರಕ್ಕಿರುತ್ತದೆ. ಇದರಲ್ಲಿ ೩೩ ಪರಗಣೆಗಳು ( ಕೌಂತಿಗಳು ) ಇರುತ್ತವೆ.

ಮುಖ್ಯ ಪಟ್ಟಣಗಳುಃ—ಎದಿನ್‌ಬರೋ ಪಟ್ಟಣವು ಸ್ಕಾತಲಂದದ ರಾಜಧಾನಿಯುಂಟು. ಗ್ಲಾಸಗೋ ಪಟ್ಟಣವು ಸ್ಕಾತ್

ಲಂದದಲ್ಲಿ ಎಲ್ಲಕ್ಕೂ ದೊಡ್ಡದದೆ; ಅಲ್ಲಿ ವಸ್ತ್ರಗಳೂ ಯಂತ್ರಗಳೂ ಹಡಗುಗಳೂ ಆಗುತ್ತವೆ. ಆಬರ್ದೀನ, ದಂಡೀ ಎಂಬೆರಡು ಪಟ್ಟಣಗಳಲ್ಲಿ ಮೇಲಾದ ನಾರಿನ ವಸ್ತ್ರಗಳು ಹುಟ್ಟುತ್ತವೆ. ಗ್ರೀನಾಕ, ಲೀಥ ಇವೆರಡು ಹೆಸರಾದ ಬಂದರಗಳು. ಆಬರ್ದೀನ, ಎದಿನ್‌ಬರೋ, ಸೆಂತಆಂದ್ರೂಸ, ಗ್ಲಾಸಗೋ ಈ ನಾಲ್ಕು ಪಟ್ಟಣಗಳಲ್ಲಿಯ ವಿದ್ಯಾಲಯಗಳು ಪ್ರಸಿದ್ಧವುಂಟು. ಪರ್ಥ, ಪೇಜಲೀ ಎಂಬ ಎರಡು ಪಟ್ಟಣಗಳಲ್ಲಿ ವಿಧವಿಧದ ಸರಕುಗಳು ಹುಟ್ಟುತ್ತವೆ. ಇವಲ್ಲದೆ ದಂಫ್ರಿಜ, ಫಾಲಕರ್ಕ, ಸ್ತರ್ಲಿಂಗ ಮುಂತಾದ ದೊಡ್ಡ ಪಟ್ಟಣಗಳುಂಟು.

**ಪರ್ವತಗಳು:**—ಗ್ರ್ಯಾಂಪಿಯನ್ನೆಂಬ ಬೆಟ್ಟಸಾಲಿನಲ್ಲಿ ಬೆನನೆವಿಸ್ ಎಂಬ ಗುಡ್ಡವು ಗ್ರೇತಬ್ರಿತನ ದೇಶದಲ್ಲಿ ಎಲ್ಲಕ್ಕೂ ಎತ್ತರವಿರುತ್ತದೆ. ಸ್ಕಾತ್‌ಲಂದದ ಉತ್ತರ ಮಧ್ಯಭಾಗಗಳಲ್ಲಿ ಗುಡ್ಡಗಳೇಹೆಚ್ಚು.

**ಹೊಳೆಗಳು:**—ತ್ವೀದ, ಫೋರ್ಥ, ತೇ, ದೀ, ಸ್ಪೇ, ನೇಸ, ಕ್ಲೈದ ಎಂಬ ಹೊಳೆಗಳು ಮುಖ್ಯವುಂಟು. ಇವುಗಳಲ್ಲಿ ಮೊದಲಿನ ಆರು ಉತ್ತರಸಮುದ್ರಕ್ಕೆ ಕೂಡುತ್ತವೆ; ಕ್ಲೈದಹೊಳೆಯು ಉತ್ತರ ಜಲಸಂಧಿಗೆ ಕೂಡುತ್ತದೆ.

**ಸರೋವರಗಳು:**— ಸ್ಕಾತ್‌ಲಂದದಲ್ಲಿ ರಮಣೀಯವಾದ ಸರೋವರಗಳು ಹಲವುಂಟು; ಲಾಖ್‌ಲೋಮಂದೆಂಬ ಸರೋವರವು ಎಲ್ಲಕ್ಕೂ ದೊಡ್ಡದಿರುತ್ತದೆ. ಅದಲ್ಲದೆ ಲಾಖ್‌ಶಿನ, ಲಾಖ್‌ಮೋರೆ, ಲಾಖ್‌ನೇಸ, ಲಾಖ್‌ಆ, ಲಾಖ್‌ತೆ ಮುಂತಾದ ಬೇರೆ ಸರೋವರಗಳು ಹಲವುಂಟು.

**ಆಖಾತಗಳು:**—ಸ್ಕಾತ್‌ಲಂದದ ದಂಡೆಯು ಅಲ್ಲಲ್ಲಿಗೆ ವಿಚ್ಛಿನ್ನವಾಗಿರುವ ಕಾರಣ ಬಹಳ ಆಖಾತಗಳು ಉಂಟಾಗಿವೆ. ಅವುಗಳಲ್ಲಿ ಫೋರ್ಥ, ತೇ, ಮೋರೆ, ಕ್ಲೈದ, ಸಾಲ್ವೆ ಎಂಬವುಗಳು ಮುಖ್ಯವುಂಟು.

**ಭೂಶಿರಗಳು:**—ದನೆತಹೆದ್ ಎಂಬ ಭೂಶಿರವು ಸ್ಕಾತಲಂದದ ತೀರ ಉತ್ತರಬಿಂದು ಉಂಟು; ಮಲ್ಲಆಫ್ ಗ್ಯಾಲೋವೆ ಎಂಬ ಭೂಶಿರವು ತೀರ ದಕ್ಷಿಣದ ತುದಿಯುಂಟು.

ದ್ವೀಪಗಳು:—ಉತ್ತರದಲ್ಲಿ ಆರ್ಕನೀ, ಶೇತಲಂದ ಎಂಬ ನಡುಗಡ್ಡೆಗಳೂ, ಪಶ್ಚಿಮದಲ್ಲಿ ಹೆಬ್ರಿದೀಜ ಎಂಬವುಗಳೂ ಪ್ರಸಿದ್ಧವುಂಟು.

ಈ ದೇಶದ ವ್ಯಾಪಾರವಾದರೂ ಇಂಗ್ಲಂಡದ ವ್ಯಾಪಾರದ ಹಾಗೇ ನಡೆಯುತ್ತದೆ.

## ೩. ಆಯರ್ಲಂದವು.

ಇದು ದೊಡ್ಡದೊಂದು ನಡುಗಡ್ಡೆಯುಂಟು. ಇದರಲ್ಲಿ ಅಲ್‌ಸ್ತರ, ಲೀನಸ್ತರ, ಮುನಸ್ತರ, ಕನ್ನಾತ ಎಂಬ ಪ್ರಾಂತಗಳುಂಟು. ಈ ಪ್ರಾಂತಗಳಲ್ಲೆಲ್ಲ ಕೂಡಿ ೩೨ ಪರಗಣೆಗಳು (ಕೌಂತಿಗಳು) ಇರುತ್ತವೆ.

ಪಟ್ಟಣಗಳು:— ದಬ್ಲಿನೆಂಬ ಮುಖ್ಯ ಪಟ್ಟಣವು ಲಿಫಿ ಎಂಬ ಹೊಳೆಯ ಧಡದಲ್ಲಿರುತ್ತದೆ. ಈ ರಾಜಧಾನಿಯಲ್ಲಿ ಒಂದು ದೊಡ್ಡ ವಿದ್ಯಾಲಯವದೆ. ಈ ಪಟ್ಟಣದ ಹತ್ತರ ಕಿಂಗ್ಸತೌನ ಎಂಬದೊಂದು ಬಂದರವದೆ. ಬೆಲ್‌ಫಾಸ್ತ ಎಂಬ ಪಟ್ಟಣವು ನಾರಿನ ವಸ್ತ್ರಗಳಿಗಾಗಿ ಹೆಸರಾಗಿದೆ. ಶಾನನ್‌ನದಿಯ ಧಡದಲ್ಲಿ ಲಿಮರಿಕ ಎಂಬ ಪಟ್ಟಣವುಂಟು; ವಾತರಫೋರ್ದ, ಲಂದನ್‌ದೆರಿ, ಕಾರ್ಕ ಮುಂತಾದ ಬೇರೆ ಪಟ್ಟಣಗಳು ತಕ್ಕ ಮಟ್ಟಿಗೆ ದೊಡ್ಡವಿರುತ್ತವೆ. ಕಾರ್ಕ ಪಟ್ಟಣದ ಹತ್ತರ ಕ್ವೀನ್ಸತೌನ ಎಂಬ ಬಂದರವು ಹೆಸರಾದದ್ದು.

ಪರ್ವತಗಳು:—ಆಯರ್ಲಂದದ ಮುಖ್ಯ ಪರ್ವತಗಳು ದಕ್ಷಿಣ ಪಶ್ಚಿಮ-ಸಮುದ್ರತೀರಗಳಲ್ಲಿರುತ್ತವೆ. ಕೆರಿ ಎಂಬ ಪರಗಣೆಯಲ್ಲಿ ಎಲ್ಲಕ್ಕೂ ಎತ್ತರವಾದ ಗುಡ್ಡಗಳುಂಟು. ಪೂರ್ವ್ವ ದಂಡೆಯ ಹತ್ತರ ಮೋರ್ನ, ವಿಕ್ಲೋ ಎಂಬ ಗುಡ್ಡಗಳು ಪ್ರಸಿದ್ಧವುಂಟು.

ಹೊಳೆಗಳು:—ಫಾಯಲ, ಬಾನ ಎಂಬೆರಡು ಹೊಳೆಗಳು ಉತ್ತರಕ್ಕೆ ಹರಿಯುತ್ತವೆ. ಬಾಯಿನ್, ಲಿಫಿ, ಸ್ಲೇನಿ ಎಂಬ ಹೊಳೆಗಳು ಆಯರಿಶಸಮುದ್ರಕ್ಕೆ ಕೂಡುತ್ತವೆ. ಸುವಿರ, ಲೀ ಎಂಬ

ಹೊಳೆಗಳು ದಕ್ಷಿಣಕ್ಕೆ ಹರಿದು, ಸಮುದ್ರಕ್ಕೆ ಕೂಡುತ್ತವೆ. ಶಾನನ್ ಹೊಳೆಯು ಅಯರ್ಲಂದದಲ್ಲಿ ಎಲ್ಲಕ್ಕೂ ದೊಡ್ಡದದೆ. ಅದು ಹಲವು ಸರೋವರಗಳೊಳಗಿಂದ ಹರಿದು ಅತ್‌ಲಾಂತಿಕ ಮಹಾಸಾಗರಕ್ಕೆ ಕೂಡುತ್ತದೆ.

**ಸರೋವರಗಳು**—ನೇ, ಅರ್ನ, ಮಾಸ್ಕ, ಕಾರಿಬ, ರೀ ದರ್ಗ, ಕಿಲ್ಲಾರ್ನಿ ಮುಂತಾದ ಎಷ್ಟೋ ಸರೋವರಗಳು ಉಂಟು.

**ಉಪಸಾಗರಗಳು**—ಅಯರ್ಲಂದದ ದಂಡೆಯು ಅಲ್ಲಲ್ಲಿಗೆ ವಿಚ್ಛಿನ್ನವಾಗಿರುವದರಿಂದ ಅಸಂಖ್ಯ ಉಪಸಾಗರಗಳಾಗಿರುತ್ತವೆ. ಅವುಗಗಳಲ್ಲಿ ದಾಸಿಗಾಲ, ಸ್ಲೈಗೊ, ಗಾಲ್ವೆ, ಬೆಲ್ಲಫಾಸ್ತ, ಫಾಯಲ ಎಂಬವುಗಳು ಮುಖ್ಯವುಂಟು.

**ಭೂಶಿರಗಳು**:—ಕೇಪಕ್ಲೀಯರೆಂಬ ಭೂಶಿರವು ಅಯರ್ಲಂದದ ದಕ್ಷಿಣಕ್ಕಿರುವದೊಂದು ನಡುಗಡ್ಡೆಯಲ್ಲಿರುತ್ತದೆ. ಮಾಲಿನ್ ಹೆದ್ ಎಂಬ ಭೂಶಿರವು ಅಯರ್ಲಂದದ ಉತ್ತರ ತುದಿಯುಂಟು; ಫೆಯರಹೆದ್ ಎಂಬ ಭೂಶಿರವು ಪೂರ್ವಕ್ಕಿರುತ್ತದೆ.

**ದ್ವೀಪಗಳು**:—ರಾಥಲಿನ್ ನಡುಗಡ್ಡೆಯು ಅಯರ್ಲಂದದ ಉತ್ತರಕ್ಕಿರುತ್ತದೆ. ಕ್ಲೇರ, ವಾಲೆನ್‌ಶಿಯಾ, ಆರನ್ ಎಂಬ ನಡುಗಡ್ಡೆಗಳು ಪಶ್ಚಿಮಕ್ಕಿರುತ್ತವೆ.

ಇಂಗ್ಲಂಡ-ಸ್ಕಾತಲಂದಗಳಿಗಿಂತ ಅಯರ್ಲಂದದಲ್ಲಿ ಒಕ್ಕಲತನವೂ ಖನಿಜಗಳೂ ಕಡಿಮೆ; ಆದರೆ ಹುಲ್ಲು ಬೆಳೆಯುವ ಭೂಮಿಯು ಪ್ರಸಿದ್ಧವುಂಟು. ಈ ದೇಶದ ಹವೆಯು ಹಿತಕರವಾದದ್ದು; ಇಲ್ಲಿ ಮಳೆ ಬಹಳ ಬೀಳುತ್ತಿರುವ ಕಾರಣ ಇಲ್ಲಿಯ ಹೊಲಗಳು ಯಾವಾಗಲೂ ಹಚ್ಚಗಿರುತ್ತವೆ; ಅದರಿಂದ ಇದಕ್ಕೆ ಹಚ್ಚಗಿನ ದ್ವೀಪವೆಂಬ ಹೆಸರು ಬಿದ್ದದೆ.

## ೨. ಫ್ರಾನ್ಸ ದೇಶವು.

ಫ್ರಾನ್ಸ ದೇಶವು ಗ್ರೇತಬ್ರಿತನ್ನದ ದಕ್ಷಿಣಕ್ಕಿರುತ್ತದೆ. ಇವೆರಡುಗಳ ನಡುವೆ ಬ್ರಿತಿಶಚಾನಲ್ಲೆಂಬ ಸಾಮುದ್ರಧುನಿಯುಂಟು. ಇದರಲ್ಲಿ ೮೭ ವಿಭಾಗಗಳು ಮಾಡಲ್ಪಟ್ಟವೆ, ಅವುಗಳಿಗೆ **ದಿಪಾರ್ತಮಾಂಗ್** ಎನ್ನುವರು.

**ಪಟ್ಟಣಗಳು**—ಪಾರಿಸ ಎಂಬ ರಾಜಧಾನಿಯು ಸೇನ ನದಿಯ ಧಡದಲ್ಲಿರುತ್ತದೆ, ಇದು ಭೂಮಿಯಲ್ಲಿ ಅತಿಸುಂದರವಾದ ಪಟ್ಟಣವು. ಇದಲ್ಲದೆ **ರುವಾಂಗ್, ಲೀಲ, ತುಲೂಜ** ಮುಂತಾದ ದೊಡ್ಡ ಪಟ್ಟಣಗಳುಂಟು; ಅವುಗಳಲ್ಲಿ ವ್ಯಾಪಾರವೂ ಕಾರಖಾನೆಗಳೂ ಬಹಳ ನಡೆಯುತ್ತವೆ. **ಬ್ರೆಸ್ತ, ಶೆಬೂರ್ಗ** ಎಂಬ ಬಂದರಗಳಲ್ಲಿ ಯುದ್ಧದ ಹಡಗುಗಳಿರುತ್ತವೆ. ಲ್ವಾರನದಿಯ ಧಡದಲ್ಲಿ **ನಾನತ್ಸ** ಎಂಬ ಪಟ್ಟಣವು ವ್ಯಾಪಾರಕ್ಕಾಗಿ ಪ್ರಸಿದ್ಧವಿರುತ್ತದೆ. ಗಾರೋನ ನದಿಯ ದಂಡೆಯಲ್ಲಿರುವ **ಬೊಡೊ** ಎಂಬ ಪಟ್ಟಣದಿಂದ ಪರದೇಶಗಳಿಗೆ ಮದ್ಯವು ಹೋಗುತ್ತದೆ. ಭೂಮಧ್ಯಸಮುದ್ರದ ದಂಡೆಯಲ್ಲಿ **ಮಾರ್ಸೆಲ್ಸ, ತೂಲೋ** ಎಂಬವೆರಡು ಹೆಸರಾದ ಬಂದರಗಳುಂಟು. ರೋನ, ಸೋನ ಇವೆರಡು ಹೊಳೆಗಳ ಸಂಗಮ ಸ್ಥಳದಲ್ಲಿ ಇರುವ ಲಾಯನ್ಸ ಎಂಬ ಪಟ್ಟಣವು ಫ್ರಾನ್ಸದಲ್ಲಿ ಪಾರಿಸದ ಹೊರ್ತು ಎಲ್ಲಕ್ಕೂ ದೊಡ್ಡದಿರುತ್ತದೆ. ಅಲ್ಲಿ ರೇಶಿಮೆಯ ಕಾರಖಾನೆಗಳು ಬಹಳ ನಡೆಯುತ್ತವೆ.

**ಪರ್ವತಗಳು**—ಪಿರಿನೀಜ ಪರ್ವತವು ಫ್ರಾನ್ಸಕ್ಕೂ ಸ್ಪೇನಕ್ಕೂ ನಡುವೆ ಇರುತ್ತದೆ; ಆಲ್ಪ್ಸ ಪರ್ವತವು ಫ್ರಾನ್ಸ್, ಇತಾಲಿ, ಸ್ವಿತ್ಸರ್ಲಂದ ಈ ಮೂರು ದೇಶಗಳ ನಡುವೆ ಇರುತ್ತದೆ

**ಹೊಳೆಗಳು**—ಸೇನನದಿಯು ಇಂಗ್ಲಿಷ ಕೊಲ್ಲಿಗೆ ಕೂಡುತ್ತದೆ; ಲ್ವಾರ, ಗಾರೋನ ಎಂಬ ಹೊಳೆಗಳು ಬಿಸ್ಕೆ ಉಪಸಾಗರಕ್ಕೆ ಕೂಡುತ್ತವೆ; ರೋನನದಿಯು ಲಾಯನ್ಸ್ ಆಖಾತಕ್ಕೆ ಕೂಡುತ್ತದೆ.

**ಆಖಾತಗಳೂ ಉಪಸಾಗರಗಳೂ**—ಬಿಸ್ಕೆ ಉಪಸಾಗರವು ಫ್ರಾನ್ಸದ ಪಶ್ಚಿಮಕ್ಕಿರುತ್ತದೆ; ಲಾಯನ್ಸ್ ಆಖಾತವು ದಕ್ಷಿಣಕ್ಕಿರುತ್ತದೆ.

**ಭೂಶಿರಗಳು**—ಲಾಹೋಗ, ಬಾರಫ್ಲೂರ್ ಎಂಬ ಭೂಶಿರಗಳು ಫ್ರಾನ್ಸದ ಉತ್ತರದಲ್ಲಿರುತ್ತವೆ.

**ದ್ವೀಪಗಳು**—ಕಾರ್ಸಿಕಾ, ಹೀಯೆರ, ಉಶಾಂಗ ಮುಂತಾದ ದ್ವೀಪಗಳು ಪ್ರಸಿದ್ಧವುಂಟು.

**ವ್ಯಾಪಾರದ ಜಿನಸುಗಳು**—ಮದ್ಯ, ರೇಶಿಮೆ, ನಾರಿನ ವಸ್ತ್ರ, ಉಣ್ಣೆಯ ವಸ್ತ್ರ, ಹೆಣಿಕೆಯ ವಸ್ತ್ರ, ಕಾಜು, ಫಲಗಳು

ಅಲಂಕಾರಗಳು ಮುಂತಾದ ಪದಾರ್ಥಗಳು ಪರದೇಶಗಳಿಗೆ ಹೋಗುತ್ತವೆ.

ಭೂಮಿಯಲ್ಲಿ ಮೇಲಾದ ಬಲಸಂಪತ್ತಿಯುಳ್ಳ ದೇಶಗಳಲ್ಲಿ ಫ್ರಾನ್ಸವು ಎಣಿಸಲ್ಪಡುತ್ತದೆ. ಈ ದೇಶದ ಜನರು ಬಹು ಬುದ್ಧಿವಂತರೂ ಉದ್ಯೋಗಿಗಳೂ ಆಗಿ, ಯಾವತ್ತು ಕಲಾಕೌಶಲ್ಯಗಳಲ್ಲಿ ನಿಪುಣರೆನಿಸಿಕೊಳ್ಳುತ್ತಾರೆ. ಈ ದೇಶದ ಪ್ರಜೆಗಳೇ ತಮ್ಮ ಪ್ರತಿನಿಧಿಗಳ ಮುಖಾಂತರವಾಗಿ ರಾಜ್ಯಕಾರಭಾರ ಮಾಡುತ್ತಾರೆ; ಅರಸು ಇಲ್ಲ. ಸದ್ಯದ ಮಹಾ ಯುದ್ಧದಲ್ಲಿ ಈ ದೇಶವು ಇಂಗ್ಲಿಷರ ಪಕ್ಷಕ್ಕೆ ಕೂಡಿದೆ.

## ೩. ಸ್ಪೇನ.

ಸ್ಪೇನವೂ ಪೋರ್ತುಗಾಲವೂ ಕೂಡಿ ಆದದ್ದೊಂದು ದೊಡ್ಡ ದ್ವೀಪಕಲ್ಪವು ಫ್ರಾನ್ಸದ ದಕ್ಷಿಣಕ್ಕಿರುತ್ತದೆ. ಸ್ಪೇನದಲ್ಲಿ ೪೯ ಪರಗಣೆಗಳುಂಟು.

ಪಟ್ಟಣಗಳು:—**ಮಾದ್ರಿದ್** ರಾಜಧಾನಿಯು ಮಾನ್ಸನಾರೆಸ ಎಂಬ ಹೊಳೆಯ ದಡದಲ್ಲಿರುತ್ತದೆ. **ತೋಲೆಥೋ** ಪಟ್ಟಣವು ತೇಗಸನದಿಯ ದಡದಲ್ಲಿ ಇರುತ್ತದೆ, **ಸಾಲಮಾಂಕಾ** ಎಂಬಲ್ಲಿ ಪ್ರಸಿದ್ಧವಾದ ವಿದ್ಯಾಲಯವಿರುತ್ತದೆ. **ಥಾರಾಗೋಥಾ** ಪಟ್ಟಣವು ಎಬ್ರೊ ಎಂಬ ನದಿಯ ದಂಡೆಯಲ್ಲಿ ಇರುತ್ತದೆ. ಇವಲ್ಲದೆ **ಸೆವಿಲ್ಲ ಗ್ರಾನಾದಾ** ಎಂಬವೆರಡು ದೊಡ್ಡ ಪಟ್ಟಣಗಳುಂಟು. **ಬಾರ್ಥೆಲೋನಾ, ವಾಲೆನ್‌ದಿಯಾ, ಕಾಥಿಥ, ಕೋರೂನಿಯಾ** ಎಂಬ ಬಂದರಗಳು ಪ್ರಸಿದ್ಧವುಂಟು. ಸ್ಪೇನದ ದಕ್ಷಿಣದಲ್ಲಿ ಜಿಬ್ರಾಲ್ತರವೆಂಬದೊಂದು ಭದ್ರವಾದ ಕೋಟೆಯು ಅದೇ ಹೆಸರಿನ ಸಾಮುದ್ರಧುನಿಯ ದಂಡೆಯಲ್ಲಿರುತ್ತದೆ; ಆ ಕೋಟೆಯು ಇಂಗ್ಲಿಷರ ವಶದಲ್ಲಿರುತ್ತದೆ.

ಪರ್ವತಗಳು:— ಪಿರಿನೀಜೆಂಬ ಮುಖ್ಯ ಪರ್ವತವು ಫ್ರಾನ್ಸಕ್ಕೂ ಸ್ಪೇನಕ್ಕೂ ನಡುವೆ ಇರುತ್ತದೆ. ಅದಲ್ಲದೆ ಬೇರೆ ಸಣ್ಣ ಪರ್ವತಗಳೆಷ್ಟೋ ಇರುತ್ತವೆ.

**ಹೊಳೆಗಳು:**—ದೂರೋ, ತೇಗಸ ಮುಂತಾದ ಹೊಳೆಗಳು ಅತ್‌ಲಾಂತಿಕ ಮಹಾಸಾಗರಕ್ಕೆ ಕೂಡುತ್ತವೆ. ಎಬ್ರೊ ಎಂಬ ಹೊಳೆಯು ಭೂಮಧ್ಯ ಸಮುದ್ರಕ್ಕೆ ಕೂಡುತ್ತದೆ.

**ಭೂಶಿರಗಳು:**—ಒರ್ತೆಗಾಲ್ಲೆಂಬ ಭೂಶಿರವು ಸ್ಪೇನದ ತೀರ ಉತ್ತರ ತುದಿಯುಂಟು; ಫಿನಿಸ್ತೆರ, ಕ್ರೂಸ, ತ್ರಾಫಲ್ಗರ ಎಂಬ ಭೂಶಿರಗಳು ಪಶ್ಚಿಮ—ಪೂರ್ವ—ದಕ್ಷಿಣ ಬಿಂದುಗಳಾಗಿರುತ್ತವೆ. ತಾರಿಫಾ ಭೂಶಿರವು ಸ್ಪೇನದ್ದೂ ಯಾವತ್ತು ಯುರೋಪಖಂಡದ್ದೂ ತೀರ ದಕ್ಷಿಣ ತುದಿಯಾಗಿರುತ್ತದೆ.

**ಸಾಮುದ್ರಧುನಿಗಳು:**—ಜಿಬ್ರಾಲ್ತರದ ಸಾಮುದ್ರಧುನಿಯು ಸ್ಪೇನಕ್ಕೂ ಆಫ್ರಿಕಕ್ಕೂ ನಡುವೆ ಇರುತ್ತದೆ. ಈ ಸಾಮುದ್ರಧುನಿಯು ಭೂಮಧ್ಯ ಸಮುದ್ರವನ್ನು ಅತ್‌ಲಾಂತಿಕಕ್ಕೆ ಕೂಡಿಸುತ್ತದೆ.

**ದ್ವೀಪಗಳು:**—ಮಾಜೊರ್ಕಾ, ಮಿನೊರ್ಕಾ, ಇವೀಸಾ, ಫೊರಮೆಂತಾರಾ ಎಂಬ ದ್ವೀಪಗಳು ಭೂಮಧ್ಯಸಮುದ್ರದಲ್ಲಿ ಇರುತ್ತವೆ. ಇವುಗಳಿಗೆ **ಬಾಲಿಯಾರಿಕ್** ದ್ವೀಪಗಳೆನ್ನುವರು. ಕಾನೆರೀ ದ್ವೀಪಗಳು ಅತ್‌ಲಾಂತಿಕ ಮಹಾಸಾಗರದಲ್ಲಿ ಇರುತ್ತವೆ.

**ವ್ಯಾಪಾರದ ಜೀನಸುಗಳು:**—ಧಾನ್ಯ, ಕುದುರೆಗಳು, ಚರ್ಮ, ಕತ್ತಿ, ರೇಶಿಮೆ, ಉಣ್ಣೆ, ಮದ್ಯ, ಒದಾಮು, ಕಿತ್ತಳೆ ಮುಂತಾದ ಪದಾರ್ಥಗಳುಂಟು. ಈ ದೇಶದಲ್ಲಿ ಖಣಿಗಳು ಹೇರಳವಾಗಿ ದೊರೆಯುತ್ತವೆ.

ಈ ದೇಶದ ನಿವಾಸಿಗಳು ಸೋಮಾರಿಗಳೂ ಅವ್ಯವಸ್ಥಿತರೂ ಇರುವ ಕಾರಣ ಯುರೋಪಖಂಡದಲ್ಲಿ ಅವರಿಗೆ ಏನೂ ಗೌರವವಿಲ್ಲ. ಅವರ ಭಾಷೆಗೆ ಸ್ಪಾನಿಶ್ ಭಾಷೆ ಎಂಬ ಹೆಸರುಂಟು. ಅರಸನೂ ಪ್ರಜೆಗಳೂ ಕೂಡಿ ರಾಜ್ಯಕಾರಭಾರ ಮಾಡುತ್ತಾರೆ.

## ೪. ಪೋರ್ತುಗಾಲದೇಶವು.

ಈ ದೇಶದಲ್ಲಿ ೧೦ ಪರಗಣೆಗಳಿವೆ.

**ಪಟ್ಟಣಗಳು:**—ಲಿಸ್‌ಬೋನ್ ರಾಜಧಾನಿಯು ತೇಗಸ ಎಂಬ ನದಿಯ ಮುಖದ ಹತ್ತರ ಇರುತ್ತದೆ. ದೂರೊನದಿಯ

ಮುಖದ ಹತ್ತಿರ ಇರುವ ಒಪೊರ್ತೋ ಎಂಬ ಪಟ್ಟಣದಲ್ಲಿ ಹುಟ್ಟುವ ದ್ರಾಕ್ಷದ ಮದ್ಯವು ಬಹು ಪ್ರಖ್ಯಾತವುಂಟು. ಕೊಯಿಂಬರಾ ಎಂಬಲ್ಲಿ ದೊಡ್ಡ ವಿದ್ಯಾಲಯವಿರುತ್ತದೆ.

**ಹೊಳೆಗಳು:**—ದೂರೊ, ತೇಗಸ ಇವೆರಡು ಮುಖ್ಯ ಹೊಳೆಗಳುಂಟು.



**ಭೂಶಿರಗಳು:**—ಸೆಂತವಿನ್ಸೆಂತ ಭೂಶಿರವು ಪೊರ್ತುಗಾಲದ ದಕ್ಷಿಣಕ್ಕಿರುತ್ತದೆ. ರೋಕಾ ಎಂಬ ಭೂಶಿರವು ಈ ದೇಶದ್ದೂ ಯುರೋಪ ಖಂಡದ್ದೂ ತೀರ ಪಶ್ಚಿಮಬಿಂದುವಿರುತ್ತದೆ.

**ದ್ವೀಪಗಳು:**—ಅಝೋರ್ಸ್, ಕೇಪವರ್ದ, ಮದೀರಾ ದ್ವೀಪಗಳು, ಅತ್‌ಲಾಂತಿಕ ಮಹಾಸಾಗರದಲ್ಲಿರುತ್ತವೆ.

**ವ್ಯಾಪಾರದ ಜಿನಸುಗಳು:**—ಮದ್ಯ, ಉಣ್ಣೆ, ಬದಾಮು, ಕಿತ್ತಳೆ ಮುಂತಾದ ಫಲಗಳು, ರೇಶಿಮೆಯ ವಸ್ತ್ರಗಳು, ಮೊದಲಾದ ಪದಾರ್ಥಗಳು ಪರದೇಶಗಳಿಗೆ ಹೋಗುತ್ತವೆ. ಈ ದೇಶದ ಗುಡ್ಡಗಳಲ್ಲಿ ಖನಿಜಗಳು ಹೇರಳವಾಗಿ ದೊರೆಯುತ್ತವೆ.

ಈ ದೇಶದವರು ಸ್ಪೇನದವರಿಗಿಂತ ಹೆಚ್ಚು ಉದ್ಯೋಗಿಗಳುಂಟು. ಇವರ ಭಾಷೆಗೆ ಪೋರ್ತುಗೀಜ ಎಂಬ ಹೆಸರುಂಟು. ಪೋರ್ತುಗೀಜ ಜನರು ಒಳಗಡೆಯಲ್ಲಿ ತಮ್ಮ ಅರಸನನ್ನು ತೆಗೆದು ಹಾಕಿ, ಪ್ರಜಾಸತ್ತಾತ್ಮಕ ರಾಜ್ಯವನ್ನು ಸ್ಥಾಪಿಸಿದ್ದಾರೆ.

## ೫. ಬೆಲ್‌ಜಮ್.

ಈ ಸಣ್ಣ ದೇಶವು ಫ್ರಾನ್ಸದ ಈಶಾನ್ಯಕ್ಕಿರುತ್ತದೆ. ಇದರಲ್ಲಿ ೯ ಪರಗಣೆಗಳಿವೆ.

**ಪಟ್ಟಣಗಳು:**-ಬ್ರೂಸೆಲ್ಸ್ ರಾಜಧಾನಿಯು ಸೆನ್ನ ಎಂಬ ನದಿಯ ದಂಡೆಯಲ್ಲಿರುತ್ತದೆ. ಈ ಪಟ್ಟಣದಲ್ಲಿ ಹುಟ್ಟುವ ಹೆಣಿಕೆಯ ವಸ್ತ್ರಗಳೂ ರತ್ನಗಂಬಳಿಗಳೂ ಪ್ರಸಿದ್ಧವುಂಟು. ಸ್ಕೆಲ್ತ ಎಂಬ ಹೊಳೆಯ ದಂಡೆಯಲ್ಲಿ ಅಂತ್ವರ್ಪ ಪಟ್ಟಣವು ವ್ಯಾಪಾರಕ್ಕಾಗಿ ಪ್ರಸಿದ್ಧ ಉಂಟು. ಮಾಲೀನ (ಮೆಕ್‌ಲಿನ) ಎಂಬ ಪಟ್ಟಣದಲ್ಲಿ ಮೇಲಾದ ಹೆಣಿಕೆಯ ವಸ್ತ್ರಗಳೂ ನಾರಿನವಸ್ತ್ರಗಳೂ ಹುಟ್ಟುತ್ತವೆ.

ಲೀಸ ಎಂಬ ಹೊಳೆಗೆ ಸ್ಕೆಲ್ತ ಹೊಳೆಯು ಕೂಡುವ ಸ್ಥಳದಲ್ಲಿ ಇರುವ ಗೆಂತ ಎಂಬ ಪಟ್ಟಣದಲ್ಲಿ ಒಂದು ವಿದ್ಯಾಲಯವಿರುವ ದಲ್ಲದೆ ಬಗೆಬಗೆಯ ಕಾರಖಾನೆಗಳು ನಡೆಯುತ್ತವೆ. ಲಿಯೆಜ ಪಟ್ಟಣದಲ್ಲಿ ಗಡಿಯಾಲಗಳೂ ಕಬ್ಬಿಣದ ಸಾಮಾನುಗಳೂ ಹುಟ್ಟು ತ್ತವೆ. ಒಸ್ತೆಂದ ಎಂಬ ಬಂದರವು ಈ ದೇಶದಲ್ಲಿ ಮುಖ್ಯವಾದದ್ದು.

**ಹೊಳೆಗಳು:**—ಮ್ಯೂಜ (ಅಥವಾ ಮಾಸ), ಸ್ಕೆಲ್ತ ಎಂಬ ಹೊಳೆಗಳು ಜರ್ಮನ್‌ಸಮುದ್ರಕ್ಕೆ ಕೂಡುತ್ತವೆ.

ಈ ದೇಶದಲ್ಲಿ ಹುಟ್ಟುವ ಅಂದವಾದ ಹೆಣಿಕೆಯ ವಸ್ತ್ರಗಳೂ ಬಗೆಬಗೆಯ ಸೂಕ್ಷ್ಮವಸ್ತ್ರಗಳೂ ಬಹಳ ಪ್ರಸಿದ್ಧವುಂಟು. ಕಬ್ಬಿಣ ಕಲ್ಲಿದ್ದಲಿಗಳ ದೊಡ್ಡ ದೊಡ್ಡ ಕಣಿಗಳು ಈ ದೇಶದಲ್ಲಿ ಬಹಳ ವುಂಟು. ಭೂಮಿಯು ಬಹಳ ಬೆಳೆಯುಳ್ಳದ್ದು; ಜನರ ವಸ್ತಿಯು ಈ ದೇಶದಲ್ಲಿ ದಟ್ಟಾಗಿ ಇದ್ದಷ್ಟು ಯುರೋಪದೊಳಗೆ ಬೇರೆ ಯಾವ ದೇಶದಲ್ಲಿಯೂ ಇಲ್ಲ. ಇಲ್ಲಿಯ ಜನರಿಗೆ ಬೆಲ್ಜೀ ಎಂಬ ಹೆಸರುಂಟು; ಇವರು ಉದ್ಯೋಗಿಗಳೂ ಕೈಗಾರಿಕೆಯ ಕೆಲಸಗ ಳಲ್ಲಿ ಕುಶಲರೂ ಇರುತ್ತಾರೆ. ಈ ದೇಶದಲ್ಲಿ ಫ್ರೆಂಚ ದಚ್ಚ ಭಾಷೆ ಗಳು ನಡೆಯುತ್ತವೆ. ಪ್ರಸ್ತುತದ ಮಹಾಯುದ್ಧದಲ್ಲಿ ಇದು ಜರ್ಮ ನ್ನರಿಗೆ ಸೇರಿದೆ.

## ೬. ಹಾಲಂಡ (ನೆದರ್ಲಂಡ).

ಈ ದೇಶವು ಬೆಲ್‌ಜಮ್ ದೇಶದ ಉತ್ತರಕ್ಕಿರುತ್ತದೆ. ಇದರಲ್ಲಿ ೧೧ ಪರಗಣೆಗಳಿವೆ. ಬೆಲ್‌ಜಮ್ ದೇಶದ ದಕ್ಷಿಣಕ್ಕೆ ಫ್ರಾನ್ಸ ಜರ್ಮನಿಗಳ ಮಧ್ಯದಲ್ಲಿ ಲಕ್ಸಂಬೂರ್ಗ ಎಂಬದೊಂದು ಸಣ್ಣ ಸ್ವತಂತ್ರ ಸಂಸ್ಥಾನವಿರುತ್ತದೆ. ಹಾಲಂದದ ಅರಸನೇ ಆ ಸಂಸ್ಥಾ ನದ ಗ್ರಾಂದ ಡ್ಯೂಕನೆನಿಸಿಕೊಳ್ಳುತ್ತಾನೆ.

**ಪಟ್ಟಣಗಳು:**—ಅಮುಸ್ತರ್ಡಾಮು ಎಂಬ ರಾಜಧಾನಿಯು ವಾಯ ಎಂಬ ಹೊಳೆಯ ದಂಡೆಯಲ್ಲಿ ಇರುತ್ತದೆ. ಇಲ್ಲಿ ವ್ಯಾಪಾ ರವು ಬಹಳ ಸಾಗುತ್ತದೆ. ಮ್ಯೂಜ ನದಿಯ ಧಡದಲ್ಲಿ ರಾತರ ಡಾಮು ಎಂಬ ಪಟ್ಟಣವು ಮತ್ತೊಂದು ದೊಡ್ಡವ್ಯಾಪಾರದ ಸ್ಥಳ

ನಿರುತ್ತದೆ. ವಾಯುವ್ಯದಲ್ಲಿ ಹೇಗ ಎಂಬ ಪಟ್ಟಣದಲ್ಲಿ ನ್ಯಾಯದ ಮುಖ್ಯ ಕೋರ್ಟು ಇರುತ್ತದೆ. **ಲೈದನ್, ಉತ್ರೆಕ್ತ,ಗ್ರೊನಿನ್ ಗೆನ್** ಎಂಬ **ಪಟ್ಟಣ**ಗಳಲ್ಲಿ ಹೆಸರಾದ ವಿದ್ಯಾಲಯಗಳುಂಟು.

**ಹೊಳೆಗಳು**—ಮ್ಯೂಜ(ಅಥವಾ ಮಾಸ),ಹ್ರೈನ, ಸ್ಕೆಲ್ತ, ಈ ಮೂರು ಮುಖ್ಯಹೊಳೆಗಳು ಜರ್ಮನ್ ಸಮುದ್ರಕ್ಕೆ ಕೂಡುತ್ತವೆ.

**ದ್ವೀಪಗಳು:**—ವಾಲ್ಚೆರನ, ತೆಕ್ಸೆಲ ಮುಂತಾದ ಹಲವು ನಡುಗಡ್ಡೆಗಳು ಈ ದೇಶದ ನೆರೆಯಲ್ಲಿರುತ್ತವೆ.

ಈ ದೇಶವು ಸಮನೆಲವುಳ್ಳದ್ದು. ಅಲ್ಲಲ್ಲಿಗೆ ಸಮುದ್ರದ ಒತ್ತುಗಳು ಈ ದೇಶದೊಳಗೆ ಬಂದಿರುತ್ತವೆ. ಸಮುದ್ರದ ನೀರು ದೇಶದೊಳಗೆ ಹೆಚ್ಚಿಗೆ ಬರಬಾರದೆಂದು ದೊಡ್ಡ ದೊಡ್ಡ ವೊಡ್ಡುಗಳನ್ನು ಹಾಕಿದ್ದಾರೆ. ವ್ಯಾಪಾರದ ಅನುಕೂಲತೆಗಾಗಿ ಹಲವು ಕಾಲಿವೆಗಳನ್ನು ಕಟ್ಟಿದ್ದಾರೆ.ಈ ದೇಶದಿಂದ ದನಗಳೂ ಉಪ್ಪಿನಮೀನುಗಳೂ ಪರದೇಶಗಳಿಗೆ ಹೋಗುತ್ತವೆ. ಈ ದೇಶದ ಜನರಿಗೆ ದಚ್ಚರೆಂಬ ಹೆಸರುಂಟು.ಅವರು ಬುದ್ಧಿವಂತರೂ ಉದ್ಯೋಗಿಗಳೂ ಒಕ್ಕಲತನದ ಕೆಲಸಗಳಲ್ಲಿ ನಿಪುಣರೂ ಇರುತ್ತಾರೆ. ದಚ್ಚರು ಜಲಪರ್ಯಟನದಲ್ಲಿ ಒಳ್ಳೇ ಎದೆಗಾರರೆಂದು ಹೆಸರಾಗಿದ್ದಾರೆ. ಅವರ ಭಾಷೆಯು ಜರ್ಮನ್ನ ಭಾಷೆಯನ್ನು ಹೋಲುತ್ತದೆ. ಮನಸ್ಸಿನ ಶ್ರಮದಿಂದ ಸಾಧ್ಯವಾಗುವಂಥ ವಿದ್ಯೆಗಳಲ್ಲಿ, ವಿಶೇಷವಾಗಿ ಚಿತ್ರವಿದ್ಯೆದಲ್ಲಿ ದಚ್ಚರೂ ಬೆಲ್ಜಿಜನರೂ ಬಹು ಕುಶಲರೆಂದು ಹೆಸರಾಗಿದ್ದಾರೆ.

## ೭. ದೆನ್ಮಾರ್ಕ.

**ಜತಲಾಂದ**ವೆಂಬ ದ್ವೀಪಕಲ್ಪವೂ ಅದರ ನೆರೆಯುಲ್ಲಿರುವನಡುಗಡ್ಡೆಗಳೂ ಕೂಡಿ ಈ ರಾಜ್ಯವಾಗಿರುತ್ತದೆ.ಜತಲಾಂದವುಉತ್ತರದಲ್ಲಿ ಬಾಲ್ತಿಕ್‌ಸಮುದ್ರಕ್ಕೂಜರ್ಮನ್ನಸುಮುದ್ರಕ್ಕೂ ನಡುವೆಇರುತ್ತದೆ.

**ಪಟ್ಟಣಗಳು:**—**ಕೋಪನಹೆಗ**ನೆಂಬ ರಾಜಧಾನಿಯು ಸೀಲಾಂದೆಂಬ ದ್ವೀಪದಲ್ಲಿ ಇರುತ್ತದೆ.**ಎಲ್ಸಿನೋರೆಂಬ** ಎರಡನೆಯ ದೊಡ್ಡ ಪಟ್ಟಣವಾದರೂ ಅದೇ ದ್ವೀಪದಲ್ಲಿರುತ್ತದೆ.

ಆದರೆ ಇವರು ಯಾವತ್ತು ಕೈಕೆಲಸಗಳಲ್ಲಿ ಕುಶಲರುಂಟು.

ಆಖಾತಗಳು:— ಲಿಂಫಿಯರ್ದೆಂಬ ಆಖಾತವು ಜತಲಾಂದದಲ್ಲಿರುತ್ತದೆ.

ಸಾಮುದ್ರಧುನಿಗಳು:—ಸೌಂದೆಂಬ ಸಾಮುದ್ರಧುನಿಯು, ಸೀಲಾಂದಕ್ಕೂ ಸ್ವೀದನಕ್ಕೂ ನಡುವೆ ಇರುತ್ತದೆ. ಗ್ರೇತಬೆಲ್ತ, ಸೀಲಾಂದಕ್ಕೂ ಫ್ಯೂನೇನ ದ್ವೀಪಕ್ಕೂ ನಡುವೆ; ಲಿತಲ್‌ಬೆಲ್ತ, ಫ್ಯೂನೇನಕ್ಕೂ ಜರ್ಮನಿಗೆ ಸೇರಿದ ಸ್ಲೇಸ್ವೀಗ್ ಎಂಬ ದ್ವೀಪಕ್ಕೂ ನಡುವೆ; ಕಾತೆಗತ, ದೆನ್ಮಾರ್ಕಕ್ಕೂ ಸ್ವೀದನಕ್ಕೂ ನಡುವೆ; ಸ್ಕ್ಯಾಗರರಾಕ, ದೆನ್ಮಾರ್ಕಕ್ಕೂ ನಾರ್ವೆ ದೇಶಕ್ಕೂ ನಡುವೆ ಇರುತ್ತದೆ.

ದ್ವೀಪಗಳು:— ಸೀಲಾಂದ, ಫ್ಯೂನೇನ, ಲೋಲಾಂದ ಎಂಬ ದ್ವೀಪಗಳೂ, ಅತ್‌ಲಾಂತಿಕ ಮಹಾಸಾಗರದಲ್ಲಿರುವ ಐಸಲಾಂದೆಂಬ ದೊಡ್ಡ ದ್ವೀಪವೂ, ಅದರ ದಕ್ಷಿಣಕ್ಕಿರುವ ಫೆಯರ್ಯೂ ಎಂಬ ದ್ವೀಪಗಳೂ ದೆಮಾರ್ಕದ ರಾಜ್ಯಕ್ಕೆ ಸೇರಿರುತ್ತವೆ. ಐಸಲಾಂದ ದ್ವೀಪವು ಗ್ರೀನಲಾಂದದ ಪೂರ್ವಕ್ಕಿರುತ್ತದೆ. ಅದರಲ್ಲಿ ಹೆಕ್ಲಾ ಎಂಬ ಪ್ರಸಿದ್ಧ ಜ್ವಾಲಾಮುಖಿಯುಂಟು.

ಈ ದೇಶದಿಂದ ದನಗಳೂ ಧಾನ್ಯಗಳೂ ಪರಸ್ಥಳಕ್ಕೆ ಹೋಗುತ್ತವೆ. ಇಲ್ಲಿಯ ನಿವಾಸಿಗಳು ಸ್ವೀದನ್-ನಾರ್ವೆಗಳ ನಿವಾಸಿಗಳ ಹಾಗೆ ಇರುತ್ತಾರೆ; ಅಂದರೆ ಅವರು ಬುದ್ಧಿವಂತರೂ ಉದ್ಯೋಗಿಗಳೂ ಜಲಪರ್ಯಟನದಲ್ಲಿ ಕುಶಲರೂ ಇರುತ್ತಾರೆ.

## ಸ್ಕಾಂದಿನಾವಿಯಾ.

ಸ್ವೀದನ್, ನಾರ್ವೆ, ಇವೆರಡೂ ಕೂಡಿ ಒಂದೇ ದ್ವೀಪಕಲ್ಪವಿರುತ್ತದೆ; ಅದಕ್ಕೆ ಸ್ಕಾಂದಿನಾವಿಯಾ ಎಂಬ ಹೆಸರುಂಟು. ಇದರ ಉತ್ತರಕ್ಕೆ ಉತ್ತರ ಮಹಾಸಾಗರವು; ಪಶ್ಚಿಮಕ್ಕೆ ಅತ್‌ಲಾಂತಿಕ ಮಹಾಸಾಗರವೂ ಜರ್ಮನ್ ಸಮುದ್ರವೂ; ದಕ್ಷಿಣಕ್ಕೆ ಸ್ಕ್ಯಾಗರರಾಕ, ಕಾತೆಗತ, ಸೌಂಧ, ಎಂಬ ಸಾಮುದ್ರಧುನಿಗಳು; ಪೂರ್ವಕ್ಕೆ ಬಾಲ್ತಿಕಸಮುದ್ರವೂ, ಬಾಥನ್ಯದ ಆಖಾತವೂ, ಫಿನ್ಲಾಂದದ ಆಖಾತವೂ ಉಂಟು.

ಸ್ವೀದನ್, ನಾರ್ವೆ ಇವೆರಡೂ ದೇಶಗಳು ಕೂಡಿ ಒಂದೇ ರಾಜ್ಯವಿತ್ತು. ಆದರೆ ಒಳಗಡೆಯಲ್ಲಿ ಇವು ಬೇರೆಬೇರೆಯಾಗಿ ಬೇರೆ ಬೇರೆ ಅರಸರಿಗೆ ಅಂಕ್ಕಿತವಾಗಿರುವವು.

## ೮. ಸ್ವೀದನ್.

ಈ ದೇಶವು ನಾರ್ವೆ ದೇಶಕ್ಕಿಂತ ದೊಡ್ಡದಿರುತ್ತದೆ; ಇದರ ಪಶ್ಚಿಮಕ್ಕೆ ನಾರ್ವೆ ದೇಶವುಂಟು. ಇದರಲ್ಲಿ ೩ ಭಾಗಗಳಿವೆ.

**ಪಟ್ಟಣಗಳು:**—**ಸ್ಟಾಕಹೋಮೆಂಬ** ರಾಜಧಾನಿಯು ಬಾಲ್ಟಿಕ್‌ಸಮುದ್ರಕ್ಕೆ ಮೇಲರ ಎಂಬ ಸರೋವರವು ಕೂಡುವ ಸ್ಥಳದಲ್ಲಿ ಇರುತ್ತದೆ. ಇದರ ಉತ್ತರದಲ್ಲಿ **ಉಪ್ಸಲಾ** ಎಂಬ ಪಟ್ಟಣದಲ್ಲಿ ದೊಡ್ಡ ವಿದ್ಯಾಲಯವುಂಟು. **ಗೋತನಬೋರ್ಗ** ಎಂಬಲ್ಲಿ ವ್ಯಾಪಾರವು ಬಹಳ ನಡಿಯುತ್ತದೆ. **ಕಾರ್ಲಸ್ಕ್ರೋನಾ** ಎಂಬಲ್ಲಿ ಸ್ವೀದನದ ಹಡಗುಪಡೆ ಇರುತ್ತದೆ.

**ಸರೋವರಗಳು:**—ವೇನರ, ವೆತ್ತರ, ಮೇಲರ ಎಂಬ ಸರೋವರಗಳು ಮುಖ್ಯವುಂಟು.

**ದ್ವೀಪಗಳು:**—ಗೊತಲಾಂದ, ಒಮೆಲಾಂದ ಇವೆರಡು ಮುಖ್ಯ ದ್ವೀಪಗಳುಂಟು.

## ೯. ನಾರ್ವೆ.

ಈ ದೇಶದಲ್ಲಿ ೬ ವಿಭಾಗಗಳಿವೆ.

**ಪಟ್ಟಣಗಳು:**—**ಕ್ರಿಸ್ತಿಯಾನಿಯಾ** ರಾಜಧಾನಿಯು; **ಬರ್ಗೆನ್** ಪಟ್ಟಣವು ವ್ಯಾಪಾರಕ್ಕಾಗಿ ಪ್ರಸಿದ್ಧವುಂಟು. **ಹಾಮರಫೆಸ್ತ** ಯುರೋಪ ಖಂಡದಲ್ಲಿ ಎಲ್ಲಕ್ಕೂ ಉತ್ತರಕ್ಕಿರುವ ಪಟಣವು; ಇಲ್ಲಿ ಬೇಸಿಗೆಯಲ್ಲಿ ಎರಡು ತಿಂಗಳು ಹಗಲು ಇರುತ್ತದೆ. ಚಳಿಗಾಲದಲ್ಲಿ ಎರಡು ತಿಂಗಳು ರಾತ್ರಿ ಇರುತ್ತದೆ.

**ಪರ್ವತಗಳು:**—ಈದೇಶದಲ್ಲಿ ಗುಡ್ಡಗಳು ಬಹಳ. ಸ್ವೀದನ್, ನಾರ್ವೆ ಇವೆರಡುಗಳ ನಡುವೆ ದಕ್ಷಿಣೋತ್ತರವಾಗಿ ದೊಡ್ಡದೊಂದು ಬೆಟ್ಟಸಾಲು ಇರುತ್ತದೆ. ಇದರ ಉತ್ತರ ಭಾಗಕ್ಕೆ ಕೊಯಿಲೆನ್ನೆಂಬ ಹೆಸರುಂಟು.

ಭೂಶಿರಗಳು:—ಕೇಪ ನಾರ್ದಕಿನ್ ಎಂಬ ಭೂಶಿರವು ಯುರೋಪದ ತೀರ ಉತ್ತರಬಿಂದುವುಂಟು; ಉತ್ತರಭೂಶಿರವು ಈ ದೇಶದ ಉತ್ತರಕ್ಕೂ, ರಾಜ ಎಂಬ ಭೂಶಿರವು ದಕ್ಷಿಣಕ್ಕೂ ಇರುತ್ತದೆ.

ದ್ವೀಪಗಳು:—ಈ ದೇಶದ ದಂಡೆಯ ಹತ್ತರ ಅಸಂಖ್ಯ ಸಣ್ಣ ಸಣ್ಣ ನಡುಗಡ್ಡೆಗಳುಂಟು. ಅವುಗಳಲ್ಲಿ ಮಾಗೆರೋಯೆ, ಲೊಫೊದೇನ್ ಎಂಬ ಹೆಸರಿನ ದ್ವೀಪಸಮುದಾಯಗಳು ಪ್ರಸಿದ್ಧವುಂಟು. ಮಿಲಸ್ಟ್ರೀಮ ಎಂಬ ಪ್ರಸಿದ್ಧವಾದ ತಿರುಗಣಿಮಡವು ಇವುಗಳ ಸೆರೆಯಲ್ಲಿಯೇ ಇರುತ್ತದೆ ಈ ದೇಶದ ದಂಡೆಯು ಬಹಳ ವಿಚ್ಛಿನ್ನವಾಗಿರುವ ಕಾರಣ ಆಖಾತಗಳೂ ಉಪಸಾಗರಗಳೂ ಅಲ್ಲಲ್ಲಿಗೆ ಇರುತ್ತವೆ. ಸರೋವರಗಳಾದರೂ ಸ್ವೀದನದಲ್ಲಿದ್ದಂತೆ ಈ ದೇಶದಲ್ಲಿಯೂ ಬಹಳ ಉಂಟು. ಆದರೆ ಅವೆಲ್ಲ ಸಣ್ಣವು.

ಸ್ವೀದನ್ ನಾರ್ವೆ ದೇಶಗಳಿಂದ ಕಬ್ಬಿಣ, ತಾಮ್ರ, ಬೆಳ್ಳಿ,ಧಾನ್ಯಗಳೂ, ಕಟ್ಟಿಗೆ ಮುಂತಾತ ಪದಾರ್ಥಗಳೂ ಪರಸ್ಥಳಕ್ಕೆ ಹೋಗುತ್ತವೆ. ಸ್ವೀದನದೊಳಗಿನ ಕಬ್ಬಿಣದ ಕಣಿಗಳು ಭೂಮಿಯಲ್ಲಿ ಹೆಸರಾಗಿರುತ್ತವೆ.

ಈ ದೇಶದ ನಿವಾಸಿಗಳು ಉದ್ಯೋಗಿಗಳೂ, ಬುದ್ಧಿವಂತರೂ ಆಗಿ, ದೇನ ಜನರಂತೆ ಸಮುದ್ರಪರ್ಯಟನದಲ್ಲಿ ಕುಶಲರಿರುತ್ತಾರೆ.

## ೧೦. ರಶಿಯ.

ಈ ದೇಶದ ಉತ್ತರಕ್ಕೆ ಉತ್ತರ ಮಹಾಸಾಗರ, ಪಶ್ಚಿಮಕ್ಕೆ ಸ್ವೀದನ್ ದೇಶ, ಬಾಥನ್ಯದ ಆಖಾತ, ಬಾಲ್ಟಿಕ್ ಸಮುದ್ರ, ಪ್ರುಶ್ಯಾ, ಆಸ್ಟ್ರಿಯ, ರೂಮಾನಿಯಾ ಎಂಬ ದೇಶಗಳು; ದಕ್ಷಿಣಕ್ಕೆ ಕಪ್ಪುಸಮುದ್ರ, ಕಾಕೆಸಸಪರ್ವತ; ಪೂರ್ವಕ್ಕೆ ಕಾಸ್ಪಿಯನ್ ಸಮುದ್ರ, ಉರಾಲನದಿ, ಉರಲ್‌ಪರ್ವತ ಈ ಪ್ರಕಾರ ಮೇರೆಗಳುಂಟು.

ಕಾಸ್ಪಿಯನ್‌ಸಮುದ್ರ, ಉರಾಲ್‌ನದಿ, ಉರಲ್‌ಪರ್ವತ ಇವುಗಳ ಪೂರ್ವಕ್ಕಿರುವ ದೇಶವೂ, ಕಾಕೆಸಸಪರ್ವತದ ದಕ್ಷಿಣಕ್ಕಿರುವ ಪ್ರದೇಶವೂ ರಶಿಯದ ರಾಜ್ಯಕ್ಕೆ ಸೇರಿರುತ್ತವೆ. ಆದರೆ ಅವು ಏಶಿಯ

ದೊಳಗೆ ಇರುವ ಕಾರಣ ಏಶಿಯದೊಳಗೇ ವಿವರಿಸ್ಪಟ್ಟವೆ. ಇಲ್ಲಿ ಯುರೋಪದೊಳಗಿನ ಭಾಗವನ್ನು ಮಾತ್ರ ವರ್ಣಿಸುತ್ತೇವೆ. ಫಿನ್‌ಲಾಂದವೂ ಪೋಲಾಂದದ ಭಾಗವೂ ಕೂಡಿ, ಯುರೋಪದೊಳಗಿನ ರಶಿಯದಲ್ಲಿ ೬೩ ವಿಭಾಗಗಳಿವೆ.

**ಪಟ್ಟಣಗಳು:—** ಸೆಂತಪೀತರ್ಸಬರ್ಗ ರಾಜಧಾನಿಯು ನೀವಾ ಎಂಬ ಹೊಳೆಯ ಧಡದಲ್ಲಿ ಇರುತ್ತದೆ. ಮಾಸ್ಕೊ ಎಂಬ ಹಳೆ ರಾಜಧಾನಿಯು ಮಾಸ್‌ಕ್ವಾ ಎಂಬ ನದಿಯ ದಂಡೆಯಲ್ಲಿ ಇರುತ್ತದೆ. ಈ ಪಟ್ಟಣವು ಸಮುದ್ರತೀರಕ್ಕೆ ಇಲ್ಲದ ಕಾರಣ ಯುದ್ಧದ ಹಡಗುಗಳನ್ನು ಈ ಪಟ್ಟಣದ ಹತ್ತರ ಇಡಲಿಕ್ಕೆ ಅನುಕೂಲವಿಲ್ಲ. ಆದರಿಂದ ಪೀತರ ದೀಗ್ರೇತ್ ಎಂಬ ಬಾದಶಹನು ಸನ್ನ ೧೭೦೩ ನೆಯ ವರ್ಷ ಸೇಂತಪೀತರ್ಸಬರ್ಗ ಪಟ್ಟಣವನ್ನು ತನ್ನ ರಾಜಧಾನಿಯನ್ನು ಮಾಡಿದನು. ಈ ಪಟ್ಟಣದ ಹತ್ತರ ಕ್ರಾನ್‌ಸ್ತಾತ ಎಂಬದೊಂದು ಕೋಟೆಯುಳ್ಳ ಬಂದರವದೆ. ವಿಸ್ತುಲಾನದಿಯ ದಂಡೆಯಲ್ಲಿ ಪೋಲಾಂದದ ಮುಂಚಿನ ರಾಜಧಾನಿಯಾದ ವಾರ್ಸಾ ಪಟ್ಟಣವಿರುತ್ತದೆ. ದೂನಾ ಎಂಬ ನದಿಯ ಮುಖದ ಹತ್ತರ ರೈಗಾಎಂಬ ದೊಡ್ಡಬಂದರವಿರುತ್ತದೆ. ಡ್ವೀನಾ ನದಿಯ ಮುಖದ ಹತ್ತರ ಆರ್ಕಾಯೆಂಜಲ ಎಂಬ ಬಂದರವಿರುತ್ತದೆ. ವೋಲ್ಗಾನದಿಯ ಮುಖದ ಹತ್ತರ ಆಸ್ತ್ರಾಖಾನನೆಂಬ ಪ್ರಸಿದ್ಧ ಬಂದರವದೆ. ಓದೆಸಾ ಎಂಬ ಬಂದರವು ಕಪ್ಪುಸಮುದ್ರದ ದಂಡೆಯಲ್ಲಿ ಇರುತ್ತದೆ. ಕ್ರಿಮಿಯಾ ಎಂಬ ದ್ವೀಪಕಲ್ಪದ ದಂಡೆಯಲ್ಲಿ ಸೆಬಾಸ್ತಪೂಲ ಎಂಬ ಬಂದರದಲ್ಲಿ ಯುದ್ಧದ ಹಡಗುಗಳಿರುತ್ತವೆ.

**ಪರ್ವತಗಳುಃ—**ಕಾಕಸಸಪರ್ವತವು ಯುರೋಪದಲ್ಲಿ ಎಲ್ಲಕ್ಕೂ ಎತ್ತರವಾದ ಪರ್ವತವು; ಉರಲ್‌ಪರ್ವತವು ಏಶಿಯ ಯುರೋಪಗಳ ಮೇರೆಯಾಗಿರುವ ಕಾರಣ ಪ್ರಸಿದ್ಧವುಂಟು.

**ಹೊಳೆಗಳು:—**ದ್ವೀನಾ ಶ್ವೇತಸಮುದ್ರಕ್ಕೆ ಕೂಡುತ್ತದೆ; ವಿಸ್ತುಲಾನದಿಯು ರಶಿಯ ಪ್ರುಶ್ಯಾಗಳಲ್ಲಿ ಹರಿದು ಬಾಲ್ಟಿಕ್‌ಸಮುದ್ರಕ್ಕೆ ಕೂಡುತ್ತದೆ; ನಿಯೆಪರ ಎಂಬ ಹೊಳೆಯು ಕಪ್ಪುಸಮು

ದ್ರಕ್ಕೆ ಕೊಡುತ್ತದೆ; ಡಾನ ಹೊಳೆಯು ಅಜೋೞವ್ ಸಮುದ್ರಕ್ಕೆ ಕೊಡುತ್ತದೆ; ವ್ಹೊಲ್ಗಾ, ಉರಾಲ್ ಇವೆರಡು ಕಾಸ್ಪಿಯನ್ ಸಮುದ್ರಕ್ಕೆ ಕೊಡುತ್ತವೆ.

**ಸರೋವರಗಳು:—** ಲಾದೋಗಾ, ಓನೇಗಾ, ಇಲ್‌ಮೆನ್ ಮುಂತಾದ ಹಲವು ಸರೋವರಗಳುಂಟು. ಲಾದೋಗಾ ಸರೋವರವು ಯುರೋಪದಲ್ಲಿ ಎಲ್ಲಕ್ಕೂ ದೊಡ್ಡದಾದ ಸೀ ನೀರಿನ ಸರೋವರವದೆ. ಯುರೋಪದೊಳಗಿನ ರಶಿಯಕ್ಕೂ ಏಶಿಯದೊಳಗಿನ ರಶಿಯಕ್ಕೂ ನಡುವೆ ಕಾಸ್ಪಿಯನ್‌ಸಮುದ್ರವೆಂಬ ಸರೋವರವುಂಟು. ☞

**ಆಖಾತಗಳೂ ಉಪಸಾಗರಗಳೂ:—** ಆರ್ಕ್‌ಯೆಂಜಲ, ಓನೇಗಾ ಎಂಬ ಉಪಸಾಗರಗಳು ಶ್ವೇತಸಮುದ್ರದಲ್ಲಿ ಇರುತ್ತವೆ; ಬಾಥನ್ಯ, ಫಿನ್‌ಲಾಂದ, ರೈಗಾ ಎಂಬ ಉಪಸಾಗರಗಳು ಬಾಲ್ಟಿಕ್ ಸಮುದ್ರದಲ್ಲಿ ಇರುತ್ತವೆ. ಪೆರಿಕೋಪ್ ಎಂಬ ಆಖಾತವು ರಶಿಯಕ್ಕೂ ಕ್ರಿಮಿಯಕ್ಕೂ ನಡುವೆ ಇರುತ್ತದೆ.

**ಸಾಮುದ್ರಧುನಿಗಳು:—** ಕೆರ್‌ಚ್ ಎಂಬ ಸಾಮುದ್ರಧುನಿಯು ಆಜೋೞವ್‌ಸಮುದ್ರಕ್ಕೂ ಕಪ್ಪುಸಮುದ್ರಕ್ಕೂ ನಡುವೆ ಇರುತ್ತದೆ.

**ದ್ವೀಪಗಳು:—** ಸ್ಪಿಟ್ಸಬರ್ಗ, ನೋವಾಜೆಂಬ್ಲಾ ಎಂಬ ದ್ವೀಪಗಳು ಉತ್ತರಮಹಾಸಾಗರದಲ್ಲಿ ಇರುತ್ತವೆ.

**ವ್ಯಾಪಾರದ ಜಿನಸುಗಳು:—** ಈ ದೇಶದಲ್ಲಿ ಧಾನ್ಯಗಳು, ನಾರು, ಸಣಬು, ಕಟ್ಟಿಗೆ, ಚರ್ಮ, ನೆಣ, ಎಣ್ಣೆ, ಡಾಂಬರು, ಉಣ್ಣೆ, ಹಗ್ಗ ಮುಂತಾದ ಪದಾರ್ಥಗಳು ಹುಟ್ಟಿ, ಪರಸ್ಥಳಕ್ಕೆ ಹೋಗುತ್ತವೆ ಈ ದೇಶದಲ್ಲಿ ಒಕ್ಕಲತನವು ಮುಖ್ಯವಾಗಿ ನಡೆಯುತ್ತದೆ; ಹುಲ್ಲು-ಬೆಳೆಯುವ ಅಡವಿಗಳೂ ಬಹಳವುಂಟು. ಉರಲ್‌ಪರ್ವತದಲ್ಲಿ ಲೋಹಗಳು ಸಮೃದ್ಧಿಯಾಗಿ ದೊರೆಯುತ್ತಿದ್ದ ಕಾರಣ ಕೈಗಾರಿಕೆಯ ಕೆಲಸಗಳಾದರೂ ಒಳಗಡೆಯಲ್ಲಿ ಆರಂಭವಾಗಿರು

---

☞ ಹಿಂದೆ ೧೦ ನೇ ಪುಟದ ಕೆಳಗಿನ ಟಿಪ್ಪಣಿ ನೋಡು.

ತ್ತವೆ. ಇಲ್ಲಿಯ ಬಾದಶಹನಿಗೆ ಝಾರನೆನ್ನುವರು; ಅವನು ತನ್ನ ಇಚ್ಛೆಗೆ ಬಂದಂತೆ ಕಾರಭಾರ ನಡಿಸುತ್ತಿದ್ದನು. ಆದರೆ ೧೯೦೭ ರಲ್ಲಿ ಪ್ರಜೆಗಳು ರಾಜ್ಯಕಾರಭಾರದ ಹಕ್ಕುಪಡೆಯಲಿಕ್ಕೆ ಝಾರನೊಡನೆ ಜಗಳ ನಡಿಸಿ ಪ್ರಜಾಸಭೆಯನ್ನು ಪಡೆದರು. ಆದರೂ ಝಾರನು ಅದನ್ನು ವಿಶೇಷವಾಗಿ ಲೆಕ್ಕಿಸದೆ ವಸ್ತುತಃ ತನ್ನ ಮನಸಿಗೆ ಬಂದಂತೆ ಕಾರಭಾರ ನಡಿಸುತ್ತಾನೆ. ಯುರೋಪದ ಇತರ ದೇಶಗಳಿಗಿಂತ ರಶಿಯದಲ್ಲಿ ಸುಧಾರಣೆಯು ಕಡಿಮೆಯುಂಟು. ಆದರೆ ಇಷ್ಟು ದೊಡ್ಡ ದೇಶವನ್ನು ಒಬ್ಬನೇ ಅರಸು ಆಳುತ್ತಿರುವ ಕಾರಣ ಯುರೋಪದೊಳಗಿನ ಅತಿಬಲಶಾಲಿಗಳಾದ ದೇಶಗಳಲ್ಲಿ ರಶಿಯವು ಎಣಿಸಲ್ಪಡುತ್ತದೆ. ಆದರೆ ಜಪಾನ ದೇಶದ ವರ್ಣನೆ ನೋಡು.

ಈ ದೇಶದ ನಿವಾಸಿಗಳಲ್ಲಿ ಬಹು ಜನರು ಸ್ಲಾವೋನಿಯನ್ ಎಂಬ ವರ್ಗದವರಿರುತ್ತಾರೆ. ಉತ್ತರ-ದಕ್ಷಿಣ-ಭಾಗಗಳಲ್ಲಿ ಮೊಂಗೋಲಿಯನ್ ( ಮೊಗಲ )ಮತ್ತು ತುರ್ಕೀ ಕುಲಗಳಿಗೆ ಹೊಂದಿದ ಜನರು ವಾಸಿಸುತ್ತಾರೆ. ಬಾದಶಹನೂ ರಾಜ್ಯದೊಳಗಿನ ಪ್ರಮುಖ ಜನರೂ ಸ್ಲಾವೋನಿಯನ್ ವರ್ಗದವರುಂಟು. ಈ ಕುಲಭೇದಗಳಿದ್ದಂತೆ ಭಾಷೆಗಳಾದರೂ ಬೇರೆ ಬೇರೆ ಇರುತ್ತವೆ. ಆದರೆ ರಶಿಯನ್ ಭಾಷೆಯು ಹೆಚ್ಚಾಗಿ ನಡೆಯುತ್ತದೆ.

ಸದ್ಯದ ಮಹಾಯುದ್ಧದಲ್ಲಿ ಜರ್ಮನ್ನರಿಗೆ ವಿರುದ್ಧವಾಗಿರುವ ಮೂರು ಪ್ರಮುಖ ರಾಷ್ಟ್ರಗಳಲ್ಲಿ ಇದುಬಂದಾಗಿದೆ. ಇದಲ್ಲದೆ ಒಳಗಡೆ ಪ್ರಜೆಗಳು ಕ್ರಾಂತಿಯನ್ನು ಮಾಡಿ ಬಾದಶಹನನ್ನು ತಳ್ಳಿದ್ದಾರೆ.

## ೧೧ ಜರ್ಮನಿ.

ಈ ದೇಶದ ಉತ್ತರಕ್ಕೆ ಜರ್ಮನ್‌ಸಮುದ್ರ, ದೆನ್ಮಾರ್ಕದೇಶ, ಬಾಲ್ಟಿಕ್‌ಸಮುದ್ರಪೂರ್ವಕ್ಕೆ ರಶಿಯದೇಶವು, ಆಗ್ನೇಯ ದಕ್ಷಿಣ ದಿಕ್ಕುಗಳಲ್ಲಿ ಆಸ್ಟ್ರಿಯ, ಸ್ವಿತ್ಸರ್ಲಂದ ಎಂಬ ದೇಶಗಳು; ಪಶ್ಚಿಮಕ್ಕೆ ಫ್ರಾನ್ಸ್, ಬೆಲ್‌ಜಮ್, ಹಾಲಂದ ಎಂಬ ದೇಶಗಳು, ಈ ಪ್ರಕಾರ ಮೇರೆಗಳಿರುತ್ತವೆ.

ಈ ದೇಶದಲ್ಲಿ ೪ ದೊಡ್ಡ ಸಂಸ್ಥಾನಗಳೂ ೧೯ ಸಣ್ಣ ಸಣ್ಣ ಸಂಸ್ಥಾನಗಳೂ ಕೂಡಿ ೨೨ ವಿಭಾಗಗಳಿವೆ. ಈ ಸಂಸ್ಥಾನಗಳೆಲ್ಲ ಒಕ್ಕಟ್ಟಾಗಿ ನಡೆಯುತ್ತವೆ. ಪ್ರುಶ್ಯಾ ದೇಶದ ಸಂಸ್ಥಾನವು ಎಲ್ಲಕ್ಕೂ ದೊಡ್ಡದುಂಟು. ಅದಕಾರಣ ಪ್ರುಶ್ಯಾದ ಬಾದಶಹನು ಅವೆಲ್ಲ ಸಂಸ್ಥಾನಗಳ ಮುಖ್ಯ ಚಕ್ರವರ್ತಿಯೆಂದೆಣಿಸಲ್ಪಡುತ್ತಾನೆ.

## ನಾಲ್ಕು ದೊಡ್ಡ ಸಂಸ್ಥಾನಗಳು.

| | | | |
|---|---|---|---|
| ಪ್ರುಶ್ಯಾ | ... ರಾಜಧಾನಿ, | ಬರ್ಲಿನ್ | ಪಟ್ಟಣ. |
| ಸಾಕ್ಸನೀ | ... ,, | ದ್ರೆಸದೇನ | ,, |
| ಬಾವಾರಿಯಾ | ... ,, | ಮುನಿಕ್ | ,, |
| ವರ್ತಂಬರ್ಗ | ... ,, | ಸ್ತುತಗಾರ್ಗ | ,, |

ಪಟ್ಟಣಗಳು:—ವಿಸ್ತುಲಾನದಿಯ ಮುಖದ ಹತ್ತರ ದಾಂಜಿಗ ಪಟ್ಟಣದಲ್ಲಿ ಧಾನ್ಯಗಳ ವ್ಯಾಪಾರವು ಬಹಳ ನಡೆಯುತ್ತದೆ. ಓದರ ನದಿಯ ದಂಡೆಯಲ್ಲಿ ಬ್ರೆಸ್ಲಾವ್, ಫ್ರಾಂಕಫೂರ್ತ, ಸ್ತೆತೀನ್ ಎಂಬ ಪಟ್ಟಣಗಳುಂಟು. ಸ್ಪ್ರೀ ಎಂಬ ಹೊಳೆಯ ಧಡದಲ್ಲಿ ಬರ್ಲಿನ್ ಪಟ್ಟಣವು ಜರ್ಮನಿಯ ರಾಜಧಾನಿಯೂ ವಿದ್ಯಾಭ್ಯಾಸದ ಮುಖ್ಯಸ್ಥಳವೂ ಇರುತ್ತದೆ. ಎಲ್ಬ ನದಿಯ ಧಡದಲ್ಲಿ ಡ್ರೆಸದೇನ, ಮಾಗ್ದೆಬೂರ್ಗ, ಹಾಂಬುರ್ಗ, ಅಲ್‌ತೋನಾ ಎಂಬ ಪಟ್ಟಣಗಳುಂಟು. ದ್ರೆಸದೇನ ಪಟ್ಟಣವು ಸಾಕ್ಸನಿಯ ರಾಜಧಾನಿಯುಂಟು. ಮಾಗ್ದೆಬೂರ್ಗವು ಭದ್ರವಾದ ಪಟ್ಟಣವು. ಹಾಂಬುರ್ಗದಲ್ಲಿ ಅಲ್ಲಿಯ ಜನರೇ ಕಾರಭಾರ ನಡಿಸುತ್ತಾರೆ; ಅಲ್ಲಿ ವ್ಯಾಪಾರವು ಬಹಳ ಸಾಗುತ್ತದೆ. ವೀಝುರನದಿಯ ಧಡದಲ್ಲಿ ಇರುವ ಬ್ರೆಮನ್ ಎಂಬ ಪಟ್ಟಣದಲ್ಲಿಯೂ ಅಲ್ಲಿಯ ಜನರೇ ಕಾರಭಾರ ನಡಿಸುತ್ತಾರೆ. ಮೇನನದಿಯ ಧಡದಲ್ಲಿ ಫ್ರಾಂಕಫೊರ್ತ, ಹ್ರೈನನದಿಯ ಧಡದಲ್ಲಿ ಸ್ತ್ರಾಸಬುರ್ಗ, ಕೊಲೋನ; ಮೊಸೇಲಿನದಿಯ ಧಡದಲ್ಲಿ ಮೆತ್‌ಝ್, ಇವೆಲ್ಲ ದೊಡ್ಡ ಪಟ್ಟಣಗಳುಂಟು. ಲೆಫಸಿಕ್, ಗಾಂತಿಜೆನ್, ಮುನಿಕ್, ಹಾಲ, ಈ ಪಟ್ಟಣಗಳು ವಿದ್ಯಾಲಯಗಳಿಗಾಗಿ ಪ್ರಸಿದ್ಧವುಂಟು.

ಕೀಲ, ಲೂಬೇಕ್, ಸ್ತ್ರಾಲಸುಂದ, ಕೋನಿಂಗ್ಸಬರ್ಗ ಎಂಬ ಬಂದರಗಳು ಬಾಲ್ತಿಕ್‌ಸಮುದ್ರದ ದಂಡೆಯಲ್ಲಿ ಇರುತ್ತವೆ. ಲೂಬೇಕ ಪಟ್ಟಣವು ಸ್ವಸತ್ತಾತ್ಮಕವುಂಟು.

**ಹೊಳೆಗಳು:**—ವಿಸ್ತುಲಾ, ಓದರ ಇವೆರಡು ಬಾಲ್ತಿಕ್ ಸಮುದ್ರಕ್ಕೆ ಕೂಡುತ್ತವೆ; ಎಲ್ಬ, ವೀಝುರ, ಹ್ರ್ಯಸ ಹೊಳೆಗಳು ಜರ್ಮನ್‌ಸಮುದ್ರಕ್ಕೆ ಕೂಡುತ್ತವೆ. ದಾನ್ಯೂಬನದಿಯು ಎಲ್ಲಕೂ ದೊಡ್ಡದುಂಟು; ಇದು ದಕ್ಷಿಣಭಾಗದಲ್ಲಿರುವ ವರ್ತಂಬರ್ಗ, ಬಾವಾರಿಯಾ ಎಂಬ ಸಂಸ್ಥಾನಗಳಲ್ಲಿ ಹರಿದು, ಆಸ್ತ್ರಿಯ ದೇಶ ವನ್ನು ಸೇರುತ್ತದೆ.

**ದ್ವೀಪಗಳು:**—ಬಾಲ್ತಿಕ್‌ಸಮುದ್ರದಲ್ಲಿರುವ ರೂಗೆನ ಎಂಬ ದ್ವೀಪವು ಜರ್ಮನಿಯ ರಾಜ್ಯಕ್ಕೆ ಸೇರಿದ ನಡುಗಡ್ಡೆಗಳಲ್ಲೆಲ್ಲ ದೊಡ್ಡದಿರುತ್ತದೆ.

ಒಟ್ಟಿಗೆ ನೋಡಲಾಗಿ ಜರ್ಮನೀ ದೇಶವು ಸಮನೆಲದುಂಟು; ಆದರೆ ದಕ್ಷಿಣ ಪಶ್ಚಿಮ ಮೇರೆಗಳಲ್ಲಿ ಕೆಲವು ಬೆಟ್ಟಸಾಲುಗಳಿರುತ್ತವೆ. ಆಲ್ಪ್ಸಪರ್ವತದ ಶಾಖೆಗಳು ವರ್ತಂಬರ್ಗ, ಬಾವಾರಿಯಾ ಎಂಬ ಸಂಸ್ಥಾನಗಳಿಗೆ ಹೊಂದಿರುತ್ತವೆ.

**ವ್ಯಾಪಾರದ ಜೀನಸುಗಳು:**—ಉಣ್ಣೆ, ನಾರು, ಕಟ್ಟಿಗೆ, ತಂಬಾಕ, ಸತುವು, ದ್ರಾಕ್ಷಾರಸ, ಸೈಂಧವಲವಣ, ಮಣ್ಣಿನ ಪಾತ್ರೆಗಳು, ಎಣ್ಣೆ ಮುಂತಾದ ಪದಾರ್ಥಗಳೂ ದನಗಳೂ ಪರದೇಶಗಳಿಗೆ ಹೋಗುತ್ತವೆ. ಈ ದೇಶದಲ್ಲಿ ಬಗೆಬಗೆಯ ಕಾರಖಾನೆಗಳು ಬಹಳ ನಡೆಯುತ್ತವೆ. ಅವುಗಳಲ್ಲಿ ನಾರು, ಉಣ್ಣೆ, ರೇಶಿಮೆಗಳ ವಸ್ತ್ರಗಳೂ, ಆಟದ ಸಾಮಾನುಗಳೂ, ಮಣ್ಣಿನ ಪಾತ್ರೆಗಳೂ, ಸುಗಂಧದ್ರವ್ಯಗಳೂ, ದ್ರಾಕ್ಷಾರಸಗಳೂ, ಯಂತ್ರಗಳೂ, ವಾದ್ಯಗಳೂ ಹುಟ್ಟುತ್ತವೆ.

ಈ ದೇಶದ ಕಣಿಗಳಲ್ಲಿ ಲೋಹಗಳೂ ರತ್ನಗಳೂ ಹೇರಳವಾಗಿ ದೊರೆಯುತ್ತವೆ. ಭೂಮಿಯು ತಕ್ಕಮಟ್ಟಿಗೆ ಬೆಳೆಯುಳ್ಳದ್ದಿರುತ್ತದೆ. ಇಲ್ಲಿಯ ಜನರು ಉದ್ಯೋಗಿಗಳೂ ಕಲಾಕೌಶಲ್ಯಗ

ಳಲ್ಲಿ ನಿಪುಣರೂ ಇರುತ್ತಾರೆ. ಮೇಲಾದ ತೋಫು ತುಬಾಕಿಗಳು ಈ ದೇಶದಲ್ಲಿ ಹುಟ್ಟುತ್ತವೆ. ಯುರೋಪದೊಳಗಿನ ಪ್ರಮುಖ ರಾಷ್ಟ್ರಗಳಲ್ಲಿ ಈ ದೇಶವು ಎಣಿಸಲ್ಪಡುತ್ತದೆ.

ಸದ್ಯದ ಮಹಾಯುದ್ಧವನ್ನು ಜರ್ಮನ್ನರೇ ಆರಂಭಿಸಿದ್ದು ಇವರಿಗೆ ಆಸ್ಟ್ರಿಯನ್ನರೂ, ತುರ್ಕರೂ, ಬಲ್ಗಾರರೂ ಕೂಡಿಕೊಂಡಿದ್ದಾರೆ.

## ೧೨. ಸ್ವಿತ್ಸರ್ಲಂದವು.

ಈ ಸಣ್ಣ ದೇಶದ ಉತ್ತರಪೂರ್ವಗಳಲ್ಲಿ ಜರ್ಮನಿ-ಆಸ್ಟ್ರಿಯ ದೇಶಗಳೂ, ದಕ್ಷಿಣದಲ್ಲಿ ಇತಾಲಿಯೂ, ಪಶ್ಚಿಮದಲ್ಲಿ ಫ್ರಾನ್ಸವೂ ಉಂಟು.

ಈ ದೇಶದಲ್ಲಿ ೨೨ ಪರಗಣೆಗಳಿವೆ, ಅವುಗಳಿಗೆ ಕ್ಯಾಂತಾನಗಳೆನ್ನುವರು.

**ಪಟ್ಟಣಗಳು:**—ಹ್ರೋನನದಿಯ ಉಗಮದ ಹತ್ತರ **ಜೆನೀವಾ** ಎಂಬ ರಾಜಧಾನಿಯಲ್ಲಿ ಮೇಲಾದ ಗಡಿಯಾಲಗಳೂ ಅಲಂಕಾರಗಳೂ ಹುಟ್ಟುತ್ತವೆ. ಹ್ರೈನನದಿಯ ದಂಡೆಯಲ್ಲಿ **ಬಾಜಲ್ ಅಥವಾ ಬಾಲ** ಎಂಬ ಪಟ್ಟಣದಲ್ಲಿ ರೇಶಿಮೆಯ ವ್ಯಾಪಾರವು ಬಹಳ ನಡೆಯುತ್ತದೆ. **ಬರ್ನ** ಎಂಬ ರಾಜಧಾನಿಯು ಆರನದಿಯ ಧಡದಲ್ಲಿ ಇರುತ್ತದೆ. **ಜ್ಯೂರಿಕ್** ಎಂಬಲ್ಲಿ ಹೆಸರಾದ ವಿದ್ಯಾಲಯವಿರುತ್ತದೆ.

**ಪರ್ವತಗಳು:**—ಈ ದೇಶದಲ್ಲಿ ಇದ್ದಷ್ಟು ಗುಡ್ಡಗಳು ಯುರೋಪದ ಯಾವ ದೇಶದಲ್ಲಿಯೂ ಇಲ್ಲ. ಅವುಗಳಲ್ಲಿ ಆಲ್ಪ್ಸ ಪರ್ವತದ ಮೂರು ಸಾಲುಗಳು ಶ್ರೇಷ್ಠ ಉಂಟು. ಈ ಪರ್ವತದ **ಮೂಂಗ್ ಬ್ಲಾಂಗ** ಎಂಬ ಅತ್ಯುನ್ನತವಾದ ಶಿಖರವು ಫ್ರಾನ್ಸ, ಸ್ವಿತ್ಸರ್ಲಂದ, ಇತಾಲಿ ಇವುಗಳ ಮಧ್ಯದಲ್ಲಿ ಇರುತ್ತದೆ.

**ಹೊಳೆಗಳು:**—ಯುರೋಪದಲ್ಲಿ ಸ್ವಿತ್ಸರ್ಲಂದವು ನೀರು ಹರಿಯುವ ದೊಡ್ಡ ಇಳುಕಲಿನ ಪ್ರದೇಶವುಂಟು. ಈ ದೇಶದಲ್ಲಿ ಹ್ರೈನ, ಹ್ರೋನ, ಇವೆರಡು ಮುಖ್ಯಹೊಳೆಗಳುಂಟು. ದಾನ್ಯೂಬ, ಪೋ ಎಂಬ ಹೊಳೆಗಳಿಗೆ ಆಲ್ಪ್ಸಪರ್ವತದ ಮೇಲಿನ ಬರ್ಫ ಕರಗಿ ನೀರು ಹರಿದು ಹೋಗುತ್ತದೆ.

ಸರೋವರಗಳುಃ—ಕಾನ್‌ಸ್ಟಾನ್ಸ, ಜಿನೀವಾ, ಇವೆರಡು ಮುಖ್ಯ ಸರೋವರಗಳುಂಟು. ಕಾನ್‌ಸ್ಟಾನ್ಸದಿಂದ ಹೈನನದಿಯೂ, ಜಿನೀವಾದಿಂದ ಹ್ರೋನನದಿಯೂ ಉಗಮವಾಗಿವೆ.

ವ್ಯಾಪಾರದ ಜೀನಸುಗಳುಃ—ರೇಶಿಮೆ, ಗಡಿಯಾಲಗಳು, ಆಭರಣಗಳು, ಹೆಣಿಕೆಯ ವಸ್ತ್ರಗಳು, ಕಟ್ಟಿಗೆ, ದನ ಮುಂತಾದವುಗಳು ಪರದೇಶಗಳಿಗೆ ಹೋಗುತ್ತವೆ.

ಈ ದೇಶದಲ್ಲಿ ಒಕ್ಕಲತನದ ಉದ್ಯೋಗವು ಮುಖ್ಯವಾಗಿ ನಡೆಯುತ್ತದೆ. ಆದರೂ ಜನರು ಉದ್ಯೋಗಿಗಳೂ ಬುದ್ಧಿವಂತರೂ ಇರುವ ಕಾರಣ ಅವರು ಬಗೆಬಗೆಯ ಕೈಗಾರಿಕೆಯ ಒಡವೆಗಳನ್ನು ಮಾಡುತ್ತಾರೆ. ಈ ನಿವಾಸಿಗಳಲ್ಲಿ ಫ್ರೆಂಚರ ವಂಶದವರು ಕೆಲವರುಂಟು. ಕೆಲವರು ಇತಾಲಿಯವರ ವಂಶದವರಿದ್ದಾರೆ; ಆದರೆ ಜರ್ಮನ್ ಜನರ ವಶಂಸ್ಥರೇ ಎಲ್ಲಕ್ಕೂ ಹೆಚ್ಚಿಗೆ ಇರುತ್ತಾರೆ. ಈ ದೇಶದ ಪ್ರಜೆಗಳೇ ರಾಜ್ಯಕಾರಭಾರ ನಡಿಸುತ್ತಾರೆ. ಅರಸು ಇಲ್ಲ.

## ೧೩ ಇತಾಲಿ

ಈ ದ್ವೀಪಕಲ್ಪವು ಮನುಷ್ಯರ ಕಾಲಿನಂತೆ ಇರುತ್ತದೆ. ಇದರ ಉತ್ತರಕ್ಕೆ ಆಲ್‌ಪ್ಸಪರ್ವತವದೆ. ಅದರಾಚೆಯಲ್ಲಿ ಆಸ್ತ್ರಿಯಸ್ವಿತ್ಸರ್ಲಂಡಗಳಿರುತ್ತವೆ; ಪಶ್ಚಿಮಕ್ಕೆ ಫ್ರಾನ್ಸ ದೇಶವೂ ಭೂಮಧ್ಯ ಸಮುದ್ರವೂ ಉಂಟು; ದಕ್ಷಿಣಕ್ಕೆ ಭೂಮಧ್ಯ ಸಮುದ್ರವದೆ. ಪೂರ್ವಕ್ಕೆ ಆದ್ರಿಯಾತಿಕ್ ಸಮುದ್ರವೂ ಆಸ್ತ್ರಿಯ ದೇಶವೂ ಉಂಟು; ಈ ದೇಶದಲ್ಲಿ ೬೩ ವಿಭಾಗಗಳುಂಟು.

ಪಟ್ಟಣಗಳುಃ—ಇತಾಲಿಯ ಪೂರ್ವದ ರಾಜಧಾನಿಯಾದ ರೋಮು ಪಟ್ಟಣವು ತೈಬರನದಿಯ ಧಡದಲ್ಲಿ ಇರುತ್ತದೆ. ಈ ಪಟ್ಟಣವು ಕ್ರಿಸ್ತ ಶಕಕ್ಕೆ ಮುಂಚೆ ೭೫೩ ನೆಯ ವರ್ಷ ಸ್ಥಾಪಿಸಲ್ಪಟ್ಟಿತು. ಇದು ಭೂಮಿಯಲ್ಲಿ ಅತಿ ಪ್ರಸಿದ್ಧ ಪಟ್ಟಣಗಳಲ್ಲಿ ಎಣಿಸಲ್ಪಡುತ್ತದೆ. ಈಗ ರೋಮನ್ ಕ್ಯಾಥಲಿಕ್ ಮತದ ಗುರುವಾದ ಪೋಪನು ಈ ಪಟ್ಟಣದಲ್ಲಿ ಇರುತ್ತಾನೆ. ಭೂಮಧ್ಯಸಮುದ್ರದ ದಂಡೆಯಲ್ಲಿ ಇತಾಲಿಯೊಳಗೆ ಎಲ್ಲಕ್ಕೂ ದೊಡ್ಡದಾದ ನೇಪಲ್ಸ ಪಟ್ಟಣವಿರುತ್ತದೆ. ಮಿಲಾನ ಪಟ್ಟಣವು ಪೂರ್ವಕಾಲದ ಲಾಂ

ಬಾರ್ಡಿ್ನೀ ಪ್ರಾಂತದ ರಾಜಧಾನಿಯು. ಸಿಸಿಲೀ ದ್ವೀಪದ ಉತ್ತರ ದಂಡೆಯಲ್ಲಿ **ಪಾಲರ್ನೋ** ಎಂಬ ರಾಜಧಾನಿಯುಂಟು. ಪೋ ನದಿಯು ದಂಡೆಯಲ್ಲಿ **ಪೂರ್ವದ** ಪೀದಮಾಂತ ಪ್ರಾಂತದ ರಾಜಧಾನಿಯಾದ **ತುರಿನ್** ಪಟ್ಟಣವದೆ. ಆರ್ನೋ ನದಿಯ ಘಡದಲ್ಲಿ ಪೂರ್ವದ ತಸ್ಕನೀ ಪ್ರಾಂತದ ರಾಜಧಾನಿಯಾದ **ಫ್ಲಾರೆನ್ಸ್** ಪಟ್ಟಣವದೆ. ಈ ಪಟ್ಟಣದ ಹತ್ತರ **ಲೆಘಾರ್ನ** ಎಂಬ ದೊಡ್ಡ ಬಂದರವುಂಟು. **ಜೆನೋವಾ** ಎಂಬ ಬಂದರವು ಅದೇ ಹೆಸರಿನ ಆಖಾತದ ದಂಡೆಯಲ್ಲಿ ಇರುತ್ತದೆ. ಆದ್ರಿಯಾತಿಕ್ ಸಮುದ್ರದ ದಂಡೆಯಲ್ಲಿ **ವೇನಿಸ** ಎಂಬ ಪ್ರಸಿದ್ಧವಾದ ಬಂದರವಿರುತ್ತದೆ; **ಪಾದುವಾ** ಎಂಬಲ್ಲಿ ದೊಡ್ಡ ವಿದ್ಯಾಲಯವುಂಟು. ಇವಲ್ಲದೆ **ಬೊಲೋನಾ, ಪಾರ್ಮಾ, ಮೆಸೀನಾ** ಎಂಬ ಪಟ್ಟಣಗಳೂ ಬ್ರಿಂದೀಸೀ * ಎಂಬ ಬಂದರವೂ ಪ್ರಸಿದ್ಧವುಂಟು. **ಸಾನ್ ಮಾರೀನೊ** ಎಂಬದೊಂದು ಸ್ವಸತ್ತಾತ್ಮಕ ಸಂಸ್ಥಾನವುಂಟು. ಇತಲಿಯ ಅರಸು ರೋಮ ಪಟ್ಟಣದಲ್ಲಿ ಇರುತ್ತಾನೆ.

**ಪರ್ವತಗಳು:**—ಉತ್ತರದಲ್ಲಿ ಆಲ್ಪ್ಸ ಪರ್ವತವದೆ. ಅಪಿನ್ನೈನ ಪರ್ವತವು ಈ ದೇಶದಲ್ಲಿ ದಕ್ಷಿಣೋತ್ತರವಿರುತ್ತದೆ. ನೇಪಲ್ಸ ಪಟ್ಟಣದ ಹತ್ತರ **ವೆಸೂವಿಯುಸ,** ಸಿಸಿಲಿಯಲ್ಲಿ ಎತ್ನಾ ಇವೆರಡು ಪ್ರಸಿದ್ಧ ಜ್ವಾಲಾಮುಖಿಗಳುಂಟು.

**ಹೊಳೆಗಳು:**—ಪೋ, ಆದಿಜೆ ಇವೆರಡು ಆದ್ರಿಯಾತಿಕ್ ಸಮುದ್ರಕ್ಕೆ ಕೂಡುತ್ತವೆ. ಆರ್ನೋ, ತೈಬರ ಇವೆರಡು ಭೂಮಧ್ಯಸಮುದ್ರಕ್ಕೆ ಕೂಡುತ್ತವೆ.

**ಸರೋವರಗಳು:**—ಗಾರ್ದಾ, ಕೋಮೊ, ಮಾಜಿಯೊರೆ ಎಂಬ ಸರೋವರಗಳು ಮುಖ್ಯವುಂಟು. ಇವಲ್ಲದೆ ಬೇರೆ ಎಷ್ಟೋ ರಮಣೀಯವಾದ ಸರೋವರಗಳಿವೆ.

**ಆಖಾತಗಳು:**—ವೇನಿಸಿದ ಆಖಾತ, ತರಂತೋ ಆಖಾತ, ಜೇನೋವಾದ ಆಖಾತ ಇವೇ ಮುಖ್ಯ ಆಖಾತಗಳು.

---

* ಹಿಂಸ್ತಾನದಿಂದ ಇಂಗ್ಲಂಡಕ್ಕೆ ಹೋಗುವ ಮಾರ್ಗದಲ್ಲಿ ಹತ್ತುತ್ತದೆ.

**ಸಾಮುದ್ರಧುನಿಗಳು:**—ಒತ್ರಾಂತೋ ಎಂಬ ಸಾಮುದ್ರಧುನಿಯು ಇತಾಲಿಗೂ ತುರ್ಕೀ ದೇಶಕ್ಕೂ ನಡುವೆ ಇರುತ್ತದೆ. ಮೆಸೀನಾದ ಸಾಮುದ್ರಧುನಿಯು ಇತಾಲಿಗೂ ಸಿಸಿಲಿಗೂ ನಡುವೆ ಇರುತ್ತದೆ. ಬೊನಿಫಾಸಿಫೋ ಎಂಬ ಸಾಮುದ್ರಧುನಿಯು ಸಾರ್ದಿನಿಯಾ, ಕಾರ್ಸಿಕಾ ಇವೆರಡು ದ್ವೀಪಗಳ ನಡುವೆ ಇರುತ್ತದೆ.

**ಭೂಶಿರಗಳು:**—ಸ್ಪಾರ್ತಿವೆಂತೋ ಎಂಬ ಭೂಶಿರವು ಇತಾಲಿಯ ದಕ್ಷಿಣದಲ್ಲಿ ಇರುತ್ತದೆ. ಪಾಸಾರೊ ಎಂಬ ಭೂಶಿರವು ಸಿಸಿಲಿಯ ದಕ್ಷಿಣಕ್ಕಿರುತ್ತದೆ.

**ದ್ವೀಪಗಳು:**—ಈ ದೇಶದ ನೆರೆಯಲ್ಲಿ ಸಿಸಿಲೀ, ಸಾರ್ದಿನಿಯಾ, ಕಾರ್ಸಿಕಾ, ಎಲ್ಬಾ ಮುಂತಾದ ದ್ವೀಪಗಳೆಷ್ಟೋ ಉಂಟು. ಭೂಮಧ್ಯ ಸಮುದ್ರದಲ್ಲಿ ಸಿಸಿಲೀ ದ್ವೀಪವು ಎಲ್ಲಕ್ಕೂ ದೊಡ್ಡದುಂಟು. ಅದು ತ್ರಿಕೋಣಾಕೃತಿಯಾಗಿ ಇತಾಲಿಯ ದಕ್ಷಿಣ ತುದಿಯ ಹತ್ತರ ಇರುತ್ತದೆ. ಸಿಸಿಲಿಯ ದಕ್ಷಿಣಕ್ಕೆ ಮಾಲ್ತಾ, ಗೋಜೋ, ಕೋಮೀನೋ ಎಂಬ ದ್ವೀಪಗಳು ಇಂಗ್ಲಿಷರ ವಶದಲ್ಲಿ ಇರುತ್ತವೆ. ಕಾರ್ಸಿಕಾ ದ್ವೀಪವು ಫ್ರೆಂಚರ ವಶದಲ್ಲಿರುತ್ತದೆ.

**ವ್ಯಾಪಾರದ ಜೀನಸುಗಳು:**—ಫಲಗಳು, ಎಣ್ಣೆ, ಮದ್ಯ, ರೇಶಿಮೆ, ಸಣಬು, ಗಂಧಕ, ಯಂತ್ರಗಳು, ಬಿಳೀ ಕಲ್ಲು ಮುಂತಾದವುಗಳುಂಟು.

ಇಲ್ಲಿಯ ನಿವಾಸಿಗಳು ಬುದ್ಧಿವಂತರಾದಾಗ್ಯೂ, ಬಡವರೂ ಆಲಸ್ಯಗಾರರೂ ಇರುತ್ತಾರೆ. ಒಕ್ಕಲತನವೇ ಅವರ ಮುಖ್ಯ ಉದ್ಯೋಗವು. ಆದರೂ ಕಾವ್ಯಗಳು, ಅಲಂಕಾರಗಳು, ಗಾಯನ, ಚಿತ್ರ ಮುಂತಾದ ಮಾನಸಿಕ ಶ್ರಮದಿಂದ ಸಾಧ್ಯವಾಗುವಂಥ ಕಲೆಗಳಲ್ಲಿ ಅವರು ಹೆಸರಾಗಿದ್ದಾರೆ. ಅವರ ಭಾಷೆಗೆ ಇತಾಲಿಯನ್ನೆಂಬ ಹೆಸರುಂಟು. ಇತಾಲಿಯನ್, ಫ್ರೆಂಚ, ಸ್ಪಾನಿಶ, ಪೋರ್ತುಗೀಜ ಇವೆಲ್ಲ ಭಾಷೆಗಳು ಲಾತಿನ ಭಾಷೆಯಿಂದ ಹುಟ್ಟಿರುವ ಕಾರಣ ಇವು ಒಂದನ್ನೊಂದು ಹೋಲುತ್ತವೆ.

## ೧೪. ಆಸ್ಟ್ರಿಯ ಮತ್ತು ಹಂಗರಿ.

ಆಸ್ಟ್ರಿಯ, ಹಂಗರೀ ಇವೆರಡು ಕೂಡಿ ಪ್ರಬಲವಾದ ರಾಜ್ಯವಾಗಿರುತ್ತದೆ. ಆಸ್ಟ್ರಿಯದ ಬಾದಶಹನೇ ಹಂಗರಿಯ ಅರಸನೆನಿಸುತ್ತಾನೆ.

ಈ ರಾಜ್ಯದ ಉತ್ತರಕ್ಕೆ ರಶಿಯ, ಜರ್ಮನಿ; ಪಶ್ಚಿಮಕ್ಕೆ ಜರ್ಮನಿ; ಸ್ವಿತ್ಸರ್ಲಂಡ, ಇತಾಲಿ; ದಕ್ಷಿಣಕ್ಕೆ ಇತಾಲಿ, ಆದ್ರಿಯಾತಿಕ್‌ಸಮುದ್ರ, ತುರ್ಕಿದೇಶ; ಪೂರ್ವಕ್ಕೆ ರೋಮಾನಿಯಾ, ರಶಿಯ ಈ ಬಗೆಯಾಗಿ ಮೇರೆಗಳಿವೆ. ಹಂಗರಿಯು ಆಸ್ಟ್ರಿಯದ ಪೂರ್ವಕ್ಕಿರುತ್ತದೆ.

ಆಸ್ಟ್ರಿಯದಲ್ಲಿ ೧೭ ಭಾಗಗಳುಂಟು; ಅವುಗಳಲ್ಲಿ ೨ ಪೋಲಾಂದದ ಭಾಗಗಳಿವೆ. ಹಂಗರಿಯಲ್ಲಿ ೫ ಭಾಗಗಳಿವೆ.

**ಪಟ್ಟಣಗಳು:**—ವಿಯೆನ್ನಾ ರಾಜಧಾನಿಯು ದಾನ್ಯೂಬನದಿಯ ಧಡದಲ್ಲಿರುತ್ತದೆ. ಪ್ರೆಸಬೂರ್ಗ, ಬ್ಯೂಡಾಪೆಸ್ತ (ಹಂಗರಿಯ ರಾಜಧಾನಿ) ಎಂಬ ಪಟ್ಟಣಗಳಾದರೂ ಅದೇ ಹೊಳೆಯ ದಂಡೆಯಲ್ಲಿ ಇರುತ್ತವೆ. ಪ್ರಾಗ ಪಟ್ಟಣವು ಬೊಹಿಮಿಯ ಪ್ರಾಂತದ ರಾಜಧಾನಿಯುಂಟು. ಇನ್ಸಬ್ರೂಕ ಎಂಬ ಪಟ್ಟಣದಲ್ಲಿ ಪ್ರಸಿದ್ಧವಾದ ವಿದ್ಯಾಲಯ ಉಂಟು. ತ್ರಿಯೆಸ್ತ ಎಂಬ ಬಂದರವು ಆದ್ರಿಯಾತಿಕ್ ಸಮುದ್ರದ ದಂಡೆಯಲ್ಲಿ ಇರುತ್ತದೆ. ಹಂಗರೀ ಪ್ರಾಂತದಲ್ಲಿ ದೆಬ್ರೆತ್‌ಸಿನ್ ಎಂಬ ಪಟ್ಟಣದಲ್ಲಿ ಮೇಲಾದ ಕೈಗಾರಿಕೆಯ ಸಾಮಾನುಗಳು ಹುಟ್ಟುತ್ತವೆ. ಸಿರಾಜಿವೊ ಬಾಸನ್ಯಾ ಪ್ರಾಂತದ ಮುಖ್ಯ ಪಟ್ಟಣವು.

**ಪರ್ವತಗಳು:**—ಆಸ್ಟ್ರಿಯದಲ್ಲಿ ಗುಡ್ಡಗಳು ಬಹಳ. ಇದರ ದಕ್ಷಿಣಕ್ಕೂ ಪಶ್ಚಿಮಕ್ಕೂ ಆಲ್ಪ್ಸ ಎಂಬ ಉನ್ನತವಾದ ಪರ್ವತಾವಳಿಯುಂಟು. ಹಂಗರಿಯ ಉತ್ತರಕ್ಕೂ ಪೂರ್ವಕ್ಕೂ ಕಾರ್ಪಾಥಿಯನೆಂಬ ಪರ್ವತಗಳಿವೆ.

**ಹೊಳೆಗಳು:**—ದಾನ್ಯೂಬ ಎಂಬ ಮುಖ್ಯ ಹೊಳೆಯು ಜರ್ಮನಿಯಿಂದ ಬಂದು ತುರ್ಕೀದೇಶಕ್ಕೆ ಹೋಗುತ್ತದೆ. ಇದಕ್ಕೆ ಕೂಡುವ ಹೊಳೆಗಳಲ್ಲಿ ಇನ್, ದ್ರಾವ, ತ್ಶೈಸ, ಸಾವ್ ಎಂಬವು ಮುಖ್ಯವುಂಟು.

**ಸರೋವರಗಳು:**—ಬಾಲಾತೋನಸೀ, ನಾಯಿಸೀದಲರಸೀ ಎಂಬ ಸರೋವರಗಳು ಮುಖ್ಯವುಂಟು

**ವ್ಯಾಪಾರದ ಜೀನಸುಗಳು:**—ಧಾನ್ಯಗಳು, ಸಣಬು, ಎಣ್ಣೆ ಫಲಗಳು, ಮದ್ಯ, ಉಣ್ಣೆ ಕಟ್ಟಿಗೆ, ಕಬ್ಬಿಣ, ಹಿತ್ತಾಳಿಗಳ ಸಾಮಾನುಗಳು, ಯಂತ್ರಗಳು, ವಾದ್ಯಗಳು ಮುಂತಾದ ಸರಕುಗಳು ಪರಸ್ಥಳಕ್ಕೆ ಹೋಗುತ್ತವೆ.

ಈ ದೇಶದ ಭೂಮಿಯು ಬೆಳೆಯುಳ್ಳದ್ದುಂಟು. ಕಣಿಗಳಲ್ಲಿ ಧಾತುಗಳೂ ಉಪಧಾತುಗಳೂ ಎಲ್ಲ ಕಡೆಯಲ್ಲಿ ದೊರೆಯುತ್ತವೆ.

ರಾಜ್ಯಕಾರಭಾರದೊಳಗೆ ಆಸ್ಟ್ರಿಯದಲ್ಲಿ ಜರ್ಮನ್ ವರ್ಗದ ಜನರೂ, ಹಂಗರಿಯಲ್ಲಿ ಮೊಂಗೋಲಿಯನ್ ವರ್ಗದ ಮಾದ್ಯಾರ ಎಂಬ ಜನರೂ ಪ್ರಮುಖರುಂಟು. ಆದರೆ ಇವೆರಡೂ ದೇಶಗಳಲ್ಲಿ ಸ್ಲಾವೋನಿಯನ್ ವರ್ಗದ ಜನರೇ ಹೆಚ್ಚು ಇರುತ್ತಾರೆ. ಇದೇ ಮೇರೆಗೆ ಆಗ್ನೇಯದಲ್ಲಿ ಗ್ರೀಕರ ವಂಶದವರೂ, ನೈಋತ್ಯದಲ್ಲಿ ಇತಾಲಿಯನ್ ಜನರ ವಂಶದವರೂ ವಾಸಿಸುತ್ತಾರೆ.

## ೧೫. ರೂಮಾನಿಯಾ.

ಈ ಸಂಸ್ಥಾನವು ಮೊದಲು ತುರ್ಕಿಯ ಸುಲ್ತಾನನಿಗೆ ಕಪ್ಪ ಕೊಡುತ್ತಿತ್ತು. ಆದರೆ ಈಗ ಸ್ವತಂತ್ರವಿರುತ್ತದೆ. ಇದರ ಕ್ಷೇತ್ರ ಫಲ ೪೯,೪೭೩ ಚಚ್ಚೌಕು ಮೈಲು, ಜನಸಂಖ್ಯೆ ೫೫,೦೦,೦೦೦ ಈ ಸಂಸ್ಥಾನವನ್ನು ಒಬ್ಬ ಅರಸನು ಆಳುತ್ತಾನೆ. ಇಲ್ಲಿಯ ರಾಜ್ಯ ವ್ಯವಸ್ಥೆಯು ಬಹುಳರವಾಗಿ ಇಂಗ್ಲಂಡದ ರಾಜ್ಯವ್ಯವಸ್ಥೆಯಂತೆ ನಡೆಯುತ್ತದೆ. ಈ ಸಂಸ್ಥಾನದ ಪೂರ್ವಕ್ಕೆ ಕಪ್ಪುಸಮುದ್ರವೂ, ಪಶ್ಚಿಮಕ್ಕೆ ಹಂಗರೀ ಪ್ರಾಂತವೂ ಉಂಟು. ಉತ್ತರಕ್ಕೂ ಈಶಾನ್ಯಕ್ಕೂ ಪ್ರೂಥನದಿ ಇರುತ್ತದೆ; ಆದರ ಆಚೆಯಲ್ಲಿ ರಶಿಯ ದೇಶವುಂಟು. ದಕ್ಷಿಣಕ್ಕೆ ದಾನ್ಯೂಬನದಿಯು ಅದರಾಚೆಯಲ್ಲಿ ಬಲ್ಗೇರಿಯಾ ಸಂಸ್ಥಾನ ಉಂಟು.

**ಪರ್ವತಗಳು:**—ಕಾರ್ಪಾಥಿಯನ್ ಪರ್ವತಗಳು ಹಂಗರಿಗೂ ರೂಮಾನಿಯಾಕ್ಕೂ ನಡುವೆ ಇರುತ್ತವೆ.

**ಹೊಳೆಗಳು**:—ಮುಖ್ಯ ಹೊಳೆ ದಾನ್ಯೂಬನದಿಯು. ಇದು ಈ ಸಂಸ್ಥಾನದಲ್ಲಿ ಹರಿದು, ಕಪ್ಪುಸಮುದ್ರಕ್ಕೆ ಕೂಡುತ್ತದೆ ಪ್ರೂಥಹೊಳೆಯು ಉತ್ತರ ಮೇರೆಗುಂಟ ಹರಿದುಬಂದು ದಾನ್ಯೂಬಹೊಳೆಗೆ ಕೂಡುತ್ತದೆ.

ಈ ಸಂಸ್ಥಾನದೊಳಗಿನವರು ತಾವು ಪೂರ್ವದ ಲೌತಿನ್ ಜನರ ವಂಶದವರೆಂದು ಹೇಳುತ್ತಾರೆ. ರಾಜಧಾನಿಯ ಹೆಸರು **ಬುಕಾರೆಸ್ತ**. **ಯಾಸೀ, ಗಾಲಾತ್ಸ** ಎಂಬೆರಡು ಪ್ರಸಿದ್ಧ ಪಟ್ಟಣಗಳುಂಟು.

## ೧೬. ಸರ್ವಿಯಾ.

ಈ ಸಂಸ್ಥಾನವು ಪೂರ್ವದಲ್ಲಿ ತುರ್ಕಿಯ ಸುಲ್ತಾನನಿಗೆ ಕಪ್ಪ ಕೊಡುತ್ತಿತ್ತು. ಆದರೆ ಈಗ ಸ್ವತಂತ್ರವಾಗಿರುತ್ತದೆ. ಇದರ ಕ್ಷೇತ್ರಫಲ ೧೮,೭೮೧ ಚಚ್ಚೌಕು ಮೈಲು, ಜನಸಂಖ್ಯೆ ೨೦,೦೦,೦೦೦ ಉಂಟು. ಇದರ ಉತ್ತರಕ್ಕೆ ದಾನ್ಯೂಬನದಿಯು, ಪೂರ್ವಕ್ಕೆ ಬಲ್ಗೇರಿಯಾ ಸಂಸ್ಥಾನವು, ಪಶ್ಚಿಮಕ್ಕೆ ಬಾಸನ್ಯಾ, ದಕ್ಷಿಣಕ್ಕೆ ತುರ್ಕೀದೇಶ; ಈ ಪ್ರಕಾರ ಮೇರೆಗಳುಂಟು. ಈ ಸಂಸ್ಥಾನವನ್ನು ಒಬ್ಬ ಅರಸನು ಆಳುತ್ತಾನೆ. ಇಲ್ಲಿಯ ರಾಜ್ಯವ್ಯವಸ್ಥೆಯು ರೂಮಾನಿಯಾದಂತೆ ಇರುತ್ತದೆ.

**ಹೊಳೆಗಳು**:—ದಾನ್ಯೂಬನದಿಯು ಈ ದೇಶದ ಉತ್ತರ ಮೇರೆಯಲ್ಲಿ ಹರಿಯುತ್ತದೆ ಸಾವ ಎಂಬ ದೊಡ್ಡ ಹೊಳೆಯು ಆಸ್ಟ್ರಿಯ ತುರ್ಕಿಗಳ ಮೇರೆಯಲ್ಲಿ ಹರಿದು, ದಾನ್ಯೂಬ ನದಿಗೆ ಕೂಡುತ್ತದೆ.

ಈ ಸಂಸ್ಥಾನದ ಜನರು ಸ್ಲಾವ್ರೋನಿಯನ್ ಎಂಬ ಕುಲದವರುಂಟು. ಇದರ ರಾಜಧಾನಿಯಾದ **ಬೆಲಗ್ರಾದ** ಎಂಬ ಭದ್ರವಾದ ಪಟ್ಟಣವು ದಾನ್ಯೂಬ, ಸಾವ, ಇವೆರಡು ಹೊಳೆಗಳ ಸಂಗಮದ ಹತ್ತರ ಇರುತ್ತದೆ. **ಕ್ರ್ಯಾಗೋಜಿವಾತ್ಜ್** ಹಳೆ ರಾಜಧಾನಿಯು

## ೧೭ ಮಾಂತೆನೆಗ್ರೋ (ಕಪ್ಪು-ಪರ್ವತ)

ಈ ಸಂಸ್ಥಾನವು ಪೂರ್ವದಲ್ಲಿ ತುರ್ಕಿಯ ಸುಲ್ತಾನನಿಗೆ ಕಪ್ಪ ಕೊಡುತ್ತಿತ್ತು, ಆದರೆ ಈಗ ಸ್ವತಂತ್ರವಾಗಿರುತ್ತದೆ. ಇದರ ಕ್ಷೇತ್ರಫಲ ೩,೫೫೦ ಚಚ್ಚೌಕು ಮೈಲು, ಜನಸಂಖ್ಯೆ ೩,೦ಲ,೭೪೦ ಉಂಟು. ಈ ಸಂಸ್ಥಾನವು ಆಸ್ಟ್ರಿಯಕ್ಕೂ ತುರ್ಕೀದೇಶಕ್ಕೂ ನಡುವೆ ಇರುತ್ತದೆ. ಇದರಲ್ಲಿ ಗುಡ್ಡಗಳೇ ಬಹಳ ಜನರು ಬಹು ಗಟ್ಟಿಗರು. ಈ ಸಂಸ್ಥಾನವನ್ನು ಒಬ್ಬ ಅರಸನು ಆಳುತ್ತಾನೆ. ಜೆತಿನಿ ಪಟ್ಟಣವು ಈ ಸಂಸ್ಥಾನದ ರಾಜಧಾನಿಯು. ಅದ್ರಿಯಾತಿಕ್‍ಸಮುದ್ರದ ಥಡದಲ್ಲಿ ಆಂತಿಭಾರೀ ಎಂಬ ಪ್ರಸಿದ್ಧ ಬಂದರವಿರುತ್ತದೆ.

## ೧ಲ ಬಲ್ಗೇರಿಯಾ

ಈ ಸಂಸ್ಥಾನವು ಪೂರ್ವದಲ್ಲಿ ತುರ್ಕಿಯ ಸುಲ್ತಾನನಿಗೆ ಕಪ್ಪ ಕೊಡುತ್ತಿತ್ತು. ಆದರೆ ೧೯೦ಲ ರಿಂದ ಪೂರ್ಣವಾಗಿ ಸ್ವತಂತ್ರವಾಗಿದೆ. ಇದರ ಕ್ಷೇತ್ರಫಲವು ೨೪,೩೬೦ ಚಚ್ಚೌಕು ಮೈಲು ಜನಸಂಖ್ಯೆ ೨೧,೯೪,೦೦೦ ಉಂಟು. ಈ ಸಂಸ್ಥಾನದ ಉತ್ತರಕ್ಕೆ ದಾನ್ಯೂಬನದಿಯೂ ದಕ್ಷಿಣಕ್ಕೆ ಬಾಲ್ಕನಪರ್ವತವೂ ಉಂಟು.

ಇಲ್ಲಿಯ ಅರಸನು ಬಲ್ಗನ ಜನರ ಝಾರನೆಂಬ ಪದವಿಯನ್ನು ಧರಿಸಿದ್ದಾನೆ. ಸೋಫಾಯಾ ಪಟ್ಟಣವು ಈ ದೇಶದ ರಾಜಧಾನಿಯು. ಕಪ್ಪುಸಮುದ್ರದ ದಂಡೆಯಲ್ಲಿ ವಾರ್ನಾ ಎಂಬದು ಮುಖ್ಯ ಬಂದರವಾಗಿದೆ. ಇವಲ್ಲದೆ ಶುಮ್ಲಾ, ಫಿಲಿಪೊಪಾಲಿಸ ಮುಂತಾದ ಪಟ್ಟಣಗಳುಂಟು.

## ೧೯ ತುರ್ಕೀದೇಶವು

ತುರ್ಕಿಯ ಉತ್ತರಕ್ಕೆ ರೂಮಾನಿಯಾ, ಸರ್ವಿಯಾ, ಆಸ್ಟ್ರಿಯ ಹಂಗರೀ ದೇಶಗಳು; ಪಶ್ಚಿಮಕ್ಕೆ ಮಾಂತೆನೆಗ್ರೋ, ಆಸ್ಟ್ರಿಯದೇಶ ಆದ್ರಿಯಾತಿಕ್‍ಸಮುದ್ರ, ಭೂಮಧ್ಯಸಮುದ್ರ; ದಕ್ಷಿಣಕ್ಕೆ ಗ್ರೀಸದೇಶ; ಪೂರ್ವಕ್ಕೆ ಆರ್ಕಿಪೆಲಾಗೊ, ಮಾರ್ಮೊರಾ, ಕಪ್ಪುಸಮುದ್ರ; ಈ ಪ್ರಕಾರ ಮೇರೆಗಳುಂಟು.

ಇಲ್ಲಿಯ ಅರಸನು ಮುಸಲ್ಮಾನ ಧರ್ಮದವನು; ಅವನಿಗೆ ಸುಲ್ತಾನನೆನ್ನುವರು. ಈ ರಾಜ್ಯದಲ್ಲಿ ಈಸ್ತ ರೂಮೀಲಿಯಾ ಮುಂತಾದ ೭ ಪ್ರಾಂತಗಳುಂಟು. ಬಾಲ್ಕನಪರ್ವತದ ದಕ್ಷಿಣಕ್ಕೆ ಈಸ್ತ ರೂಮೀಲಿಯಾ ಎಂಬ ಪ್ರಾಂತವದೆ. ಈ ಪ್ರಾಂತದ ಕ್ಷೇತ್ರ ಫಲವು ೧೩,೫೦೦ ಚಚ್ಚೌಕು ಮೈಲು, ಜನಸಂಖ್ಯೆ ೯,೬೦,೦೦೦ ಉಂಟು. ಈ ಪ್ರಾಂತವು ತುರ್ಕಿಯ ವಶದಲ್ಲಿ ಇರುತ್ತದೆ; ಆದರೆ ಇಲ್ಲಿಯ ಜನರಿಗೆ ರಾಜ್ಯಕಾರಭಾರದಲ್ಲಿ ಕೆಲವು ಹಕ್ಕುಗಳು ದೊರೆದವೆ. ತುರ್ಕಿಯ ಇತರ ಸೀಮೆಯ ಕ್ಷೇತ್ರಫಲವು ೬೩,೮೫೦ ಚಚ್ಚೌಕು ಮೈಲು, ಜನಸಂಖ್ಯೆ ೪೮,೦೦,೦೦೦ ಉಂಟು.

**ಪಟ್ಟಣಗಳು**—ತುರ್ಕಿಯ ರಾಜಧಾನಿಯಾದ **ಕಾನಸ್ತಾಂತಿನೊಪಲ್** (ಸ್ತಂಬೂಲ) ಪಟ್ಟಣವು ಬಾಸ್ಫರಸ ಎಂಬ ಸಾಮುದ್ರಧುನಿಯ ಧಡದಲ್ಲಿರುತ್ತದೆ. ಇದನ್ನು ಇಸವಿ ಸನ್ ೩೩೦ ನೆಯ ವರ್ಷ ಕಾನಸ್ತಾಂತೈನೆಂಬ ಬಾದಶಹನು ಕಟ್ಟಿಸಿದನು. **ಅದ್ರಿಯಾನೊಪಲ್** ಪಟ್ಟಣವು ವ್ಯಾಪಾರದಲ್ಲಿ ಹೆಸರಾಗಿದೆ. **ಸಾಲೊನಿಕೀ** ಎಂಬ ಆಖಾತದ ಧಡದಲ್ಲಿ ಅದೇ ಹೆಸರಿನದೊಂದು ದೊಡ್ಡ ಬಂದರವದೆ. **ಗಾಲಿಪೊಲೀ** ಎಂಬ ಬಂದರವು ದಾರ್ಡನೆಲ್ಸ ಎಂಬ ಸಾಮುದ್ರಧುನಿಯ ದಂಡೆಯಲ್ಲಿ ಇರುತ್ತದೆ.

**ಪರ್ವತಗಳು:**—ಬಾಲ್ಕನಪರ್ವತವು ಬಲ್ಗೇರಿಯಕ್ಕೂ ಈಸ್ತ ರೂಮೀಲಿಯಕ್ಕೂ ನಡುವೆ ಪೂರ್ವ-ಪಶ್ಚಿಮವಾಗಿರುತ್ತದೆ. ತುರ್ಕೀ ದೇಶದ ಪಶ್ಚಿಮಕ್ಕೂ ದಕ್ಷಿಣಕ್ಕೂ ಒಂದು ದೊಡ್ಡ ಪರ್ವತಾವಳಿಯುಂಟು. ಅದರಲ್ಲಿ ಮೌಂತ ಆಲಿಂಪಸ್ ಎಂಬದೊಂದು ಉನ್ನತ ಶಿಖರವದೆ.

**ಹೊಳೆಗಳು:**—ಡಾನ್ಯೂಬನದಿಯು ಬಲ್ಗೇರಿಯದ ಉತ್ತರ ಮೇರೆಯಲ್ಲಿ ಹರಿದು, ರೂಮೀಲಿಯಾ ಪ್ರಾಂತದೊಳಗೆ ಹೋಗಿರುತ್ತದೆ. **ಸಾವ** ಎಂಬ ದೊಡ್ಡ ಹೊಳೆಯು ಆಸ್ಟ್ರಿಯ-ತುರ್ಕಿಗಳ ಮೇರೆಗಳಲ್ಲಿ ಹರಿದು, ಸರ್ವಿಯಾ ದೇಶವನ್ನು ಸೇರುತ್ತದೆ.

**ಆಖಾತಗಳು:**--ಸಣ್ಣ ಸಣ್ಣ ಆಖಾತಗಳು ಬಹಳ ಉಂಟು. ಅವುಗಳಲ್ಲಿ ಸಾಲೊನಿಕೀ ಎಂಬ ಆಖಾತವು ಮುಖ್ಯವದೆ.

**ಸಾಮುದ್ರಧುನಿಗಳು:**—ದಾರ್ದಾನೆಲ್ಸ (ಹೆಲೆಸ್‌ಪಾಂತ) ಎಂಬ ಸಾಮುದ್ರಧುನಿಯು ಆರ್ಕಿಪೇಲಾಗೊ ಸಮುದ್ರಕ್ಕೂ ಮಾರ್ವೋರಾ ಸಮುದ್ರಕ್ಕೂ ನಡುವೆ ಇರುತ್ತದೆ.

**ದ್ವೀಪಗಳು:**—ಕ್ರೀತ (ಕಾಂದಿಯಾ) ಲೆಮ್‌ನಾಸ ಎಂಬ ದ್ವೀಪಗಳು ಮುಖ್ಯ ಉಂಟು.

**ವ್ಯಾಪಾರದ ಜೀನಸುಗಳು:**—ಧಾನ್ಯಗಳು, ಉಣ್ಣೆ, ಫಲಗಳು, ಗುಲಾಬಿಯೆಣ್ಣೆ, ರೇಶಿಮೆ, ಕಟ್ಟಿಗೆ, ಉಪ್ಪು, ತಂಬಾಕ, ಚರ್ಮ ಮುಂತಾದ ಸರಕುಗಳು ಪರಸ್ಥಳಕ್ಕೆ ಹೋಗುತ್ತವೆ. ಸ್ತಂಬೂಲ ಪಟ್ಟಣದಲ್ಲಿ ಹುಟ್ಟುವಂಥ ಸುಗಂಧದ ಎಣ್ಣೆಯು ಎಲ್ಲಿಯೂ ಹುಟ್ಟುವದಿಲ್ಲ.

ರಾಜ್ಯಕಾರಭಾರದಲ್ಲಿ ಬಲ್ಗೇರಿಯನ್ ಜನರು ಈಸ್ತ ರೂಮಿಲಿಯದಲ್ಲಿಯೂ, ತುರ್ಕ ಜನರು ಉಳಿದ ಯಾವತ್ತು ತುರ್ಕೀದೇಶದಲ್ಲಿಯೂ ಪ್ರಮುಖರುಂಟು. ಆದರೆ ಈ ದೇಶದಲ್ಲಿ ಸ್ಲಾವೋನಿಯನ್ ಕುಲದ ಜನರೂ ಗ್ರೀಕ ಜನರೂ ಮುಖ್ಯವಾಗಿ ವಾಸಿಸುತ್ತಾರೆ. ಈ ದೇಶದ ಭೂಮಿಯು ಬೆಳೆಯುಳ್ಳದ್ದು; ಅಲ್ಲಲ್ಲಿಗೆ ಲೋಹಗಳ ಕಣಿಗಳು ಬಹಳ ಉಂಟು. ಜನರು ಒಳ್ಳೇಯವರು, ಆದರೆ ಗಟ್ಟಿಗರಲ್ಲ. ಸುಲ್ತಾನನಾದರೂ ಅವ್ಯವಸ್ಥಿತನಿರುತ್ತಾರೆ. ಸ್ವತಂತ್ರದಿಂದ ರಾಜ್ಯವಾಳುತ್ತಿದ್ದನು. ಆದರೆ ೧೮೭೬ರ ರಿಂದ ಪ್ರಜೆಗಳಿಗೆ ರಾಜ್ಯಕಾರಭಾರದಲ್ಲಿ ಕೆಲವು ಹಕ್ಕುಗಳು ದೊರೆತಿವೆ. ೧೯೧೨ ದಲ್ಲಿ ರುಮಾನಿಯಾ, ಸರ್ವಿಯಾ, ಮಾಂತಿನಿಗ್ರೊ ಮುಂತಾದ ಸಂಸ್ಥಾನಗಳು ಒಂದುಗೂಡಿ ತುರ್ಕರ ಕೂಡ ಯುದ್ಧ ನಡಿಸಿ ತುರ್ಕರ ವಶದಲ್ಲಿದ್ದ ಬಹಳ ಪ್ರಾಂತವನ್ನು ತಮ್ಮೊಳಗೆ ಹಂಚಿಕೊಂಡವು.

## ೨೦ ಗ್ರೀಸ ದೇಶವು.

ತುರ್ಕೀದೇಶದ ದಕ್ಷಿಣಕ್ಕೆ ಗ್ರೀಸದೇಶವಿರುತ್ತದೆ. ಇದರ ಕ್ಷೇತ್ರಫಲ ೨೫,೦೦೦ ಚಚೌಕು ಮೈಲು, ಜನಸಂಖ್ಯೆ ೨೨,೦೦,೦೦೦ ಇದರ ದಕ್ಷಿಣಕ್ಕೂ ಪಶ್ಚಿಮಕ್ಕೂ ಭೂಮಧ್ಯ ಸಮುದ್ರವದೆ.

ಪೂರ್ವಕ್ಕೆ ಆರ್ಕಿಪೆಲಾಗೊ ಉಂಟು. ತುರ್ಕಿದೇಶವೂ ಗ್ರೀಸವೂ ಕೂಡಿ ಒಂದು ದ್ವೀಪಕಲ್ಪವದೆ.

ಈ ದೇಶದಲ್ಲಿ ೧. ಉತ್ತರ ಭಾಗ, ೨. ಮೋರಿಯದ ದ್ವೀಪಕಲ್ಪ, ೩. ನೆರೆ ದ್ವೀಪಗಳು ಎಂಬ ಮೂರು ಭಾಗಗಳಿವೆ.

**ಪಟ್ಟಣಗಳು:**—ಅಥೆನ್ಸ ಎಂಬ ರಾಜಧಾನಿಯು ಪ್ರಾಚೀನ ಕಾಲದ ಇತಿಹಾಸದಲ್ಲಿ ಬಹು ಪ್ರಸಿದ್ಧವಾದದ್ದು; ಕಾರಿಂಥ ಪಟ್ಟಣವು ಅದೇ ಹೆಸರಿನ ಸಂಯೋಗಭೂಮಿಯ ಹತ್ತರ ಇರುತ್ತದೆ. ನಾಪಲ್ಯಾ ಎಂಬ ಮುಖ್ಯ ಬಂದರವುಂಟು. ಸ್ಪಾರ್ತಾ, ಕಾರ್ಫೂ ಎಂಬ ಪಟ್ಟಣಗಳಾದರೂ ದೊಡ್ಡವಿರುತ್ತವೆ.

**ಆಖಾತಗಳು:**— ಪಾತ್ರಾಸ, ಲೆಪಾಂತೋ (ಕಾರಿಂಥ) ಎಂಬ ಆಖಾತಗಳು ಉತ್ತರ-ಭಾಗಕ್ಕೂ ಮೋರಿಯಕ್ಕೂ ನಡುವೆ ಇರುತ್ತವೆ. ಈಜೀನಾ ಎಂಬ ಆಖಾತವು ಮೋರಿಯಕ್ಕೂ ಅಥೆನ್ಸಕ್ಕೂ ನಡುವೆ ಇರುತ್ತದೆ.

**ಭೂಶಿರಗಳು:**—ಮೋರಿಯದ ದಕ್ಷಿಣ ತುದಿಗೆ ಮಾತಾಪಾನ ಎಂಬ ಹೆಸರುಂಟು; ಇದು ಪ್ರಸಿದ್ಧ ಭೂಶಿರವು.

**ಸಂಯೋಗಭೂಮಿಯು:**—ಮೋರಿಯಾ ದ್ವೀಪಕಲ್ಪಕ್ಕೂ ಉತ್ತರಭಾಗಕ್ಕೂ ನಡುವೆ ಕಾರಿಂಥದ ಸಂಯೋಗಭೂಮಿಯುಂಟು.

**ದ್ವೀಪಗಳು:**—ಆಯೋನಿಯನ್ ದ್ವೀಪಗಳು ಗ್ರೀಸದ ಪಶ್ಚಿಮಕ್ಕಿರುತ್ತವೆ. ನೆಗ್ರೋಪಾಂತ, ಸೈಕ್ಲೆದೀಜ ಎಂಬ ದ್ವೀಪಗಳು ಗ್ರೀಸದ ಪೂರ್ವಕ್ಕಿರುತ್ತವೆ.

**ಪರ್ವತಗಳು:**—ಈ ದೇಶದಲ್ಲಿ ಎಲ್ಲೆಲ್ಲಿ ನೋಡಿದರೂ ಗುಡ್ಡಗಳೇ ಇರುತ್ತವೆ. ಅವುಗಳಲ್ಲಿ ಮೌಂತ್ ಪಾರ್ನಾಸಸ ಎಂಬ ಶಿಖರವು ಬಹಳ ಎತ್ತರ ಉಂಟು.

**ವ್ಯಾಪಾರದ ಜಿನಸುಗಳು:**—ಒಣಗಿದ ಫಲಗಳು, ಎಣ್ಣೆ, ಸೀಸು ಮುಂತಾದ ಪದಾರ್ಥಗಳು ಪರಸ್ಥಳಕ್ಕೆ ಹೋಗುತ್ತವೆ. ಗ್ರೀಕ ಜನರು ಸೌಮ್ಯರಾದಾಗ್ಯೂ ಜಲಪರ್ಯಟನದಲ್ಲಿ ಕುಶಲರೂ ವ್ಯಾಪಾರದಲ್ಲಿ ಮನಸ್ಸುಳ್ಳವರೂ ಇರುತ್ತಾರೆ. ಅರಸನು ಅವ್ಯವಸ್ಥಿತನಿರುತ್ತಾನೆ.

---

## ೪ ನೆಯ ಭಾಗ.

## ಆಫ್ರಿಕ ಖಂಡವು.

ಆಫ್ರಿಕ ಖಂಡವು ಅಪ್ರಮಾಣವಾದದ್ದೊಂದು ದ್ವೀಪಕಲ್ಪವಿ ರುತ್ತದೆ. ಸುಯೇಜ ಎಂಬ ಸಂಯೋಗಭೂಮಿಯು ಈ ಖಂಡವನ್ನು ಏಶಿಯ ಖಂಡಕ್ಕೆ ಜೋಡಿಸುತ್ತದೆ. ಇದರ ಉತ್ತರಕ್ಕೆ ಭೂಮಧ್ಯಸಮುದ್ರವು; ಪಶ್ಚಿಮಕ್ಕೆ ಅತ್‍ಲಾಂತಿಕ ಮಹಾಸಾಗರವು; ಪೂರ್ವಕ್ಕೆ ಹಿಂದೀಮಹಾಸಾಗರ, ಕೆಂಪುಸಮುದ್ರ, ಸುಯೇಜದ ಸಂಯೋಗಭೂಮಿ, ಅರಬಸ್ಥಾನ, ಸಿರಿಯಾಪ್ರಾಂತ. ಈ ಪ್ರಕಾರ ಮೇರೆಗಳಿರುತ್ತವೆ.

ವರ್ಣನೆಯ ಅನುಕೂಲಕ್ಕಾಗಿ ಈ ಖಂಡದಲ್ಲಿ ಉತ್ತರ ಆಫ್ರಿಕ, ಸಹರಾ, ಸೌದನ, ಪಶ್ಚಿಮ ಆಫ್ರಿಕ, ದಕ್ಷಿಣ ಆಫ್ರಿಕ, ಪೂರ್ವ ಆಫ್ರಿಕ,ನೆರೆ ದ್ವೀಪಗಳು ಈ ಪ್ರಕಾರ ೭ ಭಾಗಗಳು ಕಲ್ಪಿಸಲ್ಪಟ್ಟವೆ.

ಉತ್ತರ ಆಫ್ರಿಕದ ಜನರು ಬಹುತರವಾಗಿ ಮುಸಲ್ಮಾನರುಂಟು. ಆದರೆ ಅಬಿಸೀನಿಯಾ ದೇಶದಲ್ಲಿ ಕ್ರಿಸ್ತಿಗಳೂ ಯಹೂದಿಯರೂ ಬಹು ಜನರುಂಟು. ಪಶ್ಚಿಮ ಆಫ್ರಿಕ, ಸೌದನಗಳಲ್ಲಿ ದಪ್ಪ ತುಟಿಗಳುಳ್ಳವಾಗಿ, ಉಣ್ಣೆಯಂಥ ಕೂದಲಿನಿಂದ ಒಪ್ಪುವ ಕರಿ ಮೈಬಣ್ಣದ ಸಿದ್ದೀ ಜನರು ವಾಸಿಸುತ್ತಾರೆ. ಇವರು ತೀರ ಕಾಡು ಜನರು; ಮನುಷ್ಯರ ಮಾಂಸವನ್ನು ತಿನ್ನುವರು; ನಿರಂತರವಾಗಿ ನೆರೆಹೊರೆಯವರ ಸಂಗಡ ಕದನ ನಡಿಸುವರು. ದಕ್ಷಿಣ ಆಫ್ರಿಕ, ಪೂರ್ವ ಆಫ್ರಿಕ ಎಂಬ ಭಾಗಗಳ ನಿವಾಸಿಗಳು ಇವರಿಗಿಂತ ಹೆಚ್ಚಿಗೆ ಸುಧಾರಿಸಿದವರು. ಸಮುದ್ರತೀರದ ಕೆಲವು ಪಟ್ಟಣಗಳಲ್ಲಿ ಮಲಾಯೀ ಜನರೂ ಅರಬರೂ ವಾಸಿಸುತ್ತಾರೆ.

### ೧. ಉತ್ತರ ಆಫ್ರಿಕ.

ಈ ಭಾಗದಲ್ಲಿ ಇಜಿಪ್ತ, ಅಬಿಸೀನಿಯಾ, ಬಾರ್ಬರೀ ಸಂಸ್ಥಾನಗಳು ಎಂಬ ಮೂರು ದೇಶಗಳಿವೆ.

### ೧. ಇಜಿಪ್ತ ದೇಶವು.

ಈ ದೇಶವು ಆಫ್ರಿಕದ ಈಶಾನ್ಯ ಮೂಲೆಯಲ್ಲಿ ಇರುತ್ತದೆ. ಇದರ ಉತ್ತರಕ್ಕೆ ಭೂಮಧ್ಯಸಮುದ್ರ; ಪಶ್ಚಿಮಕ್ಕೆ ತ್ರಿಪೋಲಿ,

ಲಿಬಿಯ ಎಂಬ ಬೈಲು ( ಸಹಾರಾ ಎಂಬ ದೊಡ್ಡ ಬೈಲಿನ ಪೂರ್ವ ಭಾಗವು ); ಪೂರ್ವಕ್ಕೆ ಕೆಂಪುಸಮುದ್ರವೂ ಸುಯೇಜದ ಸಂಯೋಗಭೂಮಿಯೂ ಉಂಟು.

ಈ ದೇಶದೊಳಗೆ ನಿಜ ಇಜಿಪ್ತ, ನ್ಯೂಬಿಯಾ, ಕಾರ್ದೋಫಾನ, ಅದರ ದಕ್ಷಿಣಕ್ಕೆ ಗೊಂದೊಕೇರೋ ಎಂಬಲ್ಲಿಯ ವರೆಗೆ ನೈಲ ನದಿಯ ದಂಡೆಯ ಪ್ರದೇಶವು, ಇಷ್ಟೆಲ್ಲ ಸಂಗ್ರಹಿಸಲ್ಪಡುತ್ತವೆ. ನೈಲನದಿಯ ದಂಡೆಯ ಪ್ರದೇಶವು ಇನ್ನೂ ಚನ್ನಾಗಿ ಗೊತ್ತಾಗಿಲ್ಲ.

ನಿಜ ಇಜಿಪ್ತದೊಳಗೆ ನೈಲನದಿಯ ದಂಡೆಯ ಪಟ್ಟಿಯೂ, ಅದರ ಎರಡೂ ಕಡೆಯಲ್ಲಿರುವ ಉಸುಬಿನ ಬೈಲುಗಳೂ ಬರುತ್ತವೆ. ಈ ಬೈಲುಗಳಲ್ಲಿ ಸಹ ಕೆಲಕೆಲವು ಕಡೆಯಲ್ಲಿ ಬೆಳೆಯುಳ್ಳ ಪ್ರದೇಶಗಳುಂಟು. ನಿಜ ಇಜಿಪ್ತದಲ್ಲಿ ಕೆಳಗಿನ ಇಜಿಪ್ತ * ಮಧ್ಯ ಇಜಿಪ್ತ, ಮೇಲಿನ ಇಜಿಪ್ತ ಎಂಬ ಮೂರು ಭಾಗಗಳುಂಟು. ಮೇಲಿನ ಇಜಿಪ್ತದ ದಕ್ಷಿಣಕ್ಕೆ ನ್ಯೂಬಿಯಾ, ಕಾರ್ದೋಫಾನ ಪ್ರಾಂತಗಳಿವೆ.

**ಪಟ್ಟಣಗಳು**:—ಇಜಿಪ್ತದ ರಾಜಧಾನಿಯಾದ **ಕಾಯರೋ** ಪಟ್ಟಣವು ನೈಲನದಿಯ ಥಡದಲ್ಲುಂಟು. ಅದರ ವಾಯುವ್ಯಕ್ಕೆ **ಅಲೆಕ್‌ಜಾಂಡ್ರಿಯಾ** ಎಂಬ ಬಂದರವಿದೆ. ಈ ಪಟ್ಟಣವನ್ನು ದೊಡ್ಡ ಶಿಕಂದರ ಬಾದಶಹನು ಸ್ಥಾಪಿಸಿದನು. ಸುಯೆಜದ ಕಾಲುವೆಯ ಉತ್ತರ ತುದಿಯ ಹತ್ತರ **ಪೋರ್ತಸೈದ**ವೆಂಬ ಬಂದರವೂ ದಕ್ಷಿಣ ತುದಿಯ ಹತ್ತರ **ಸುಯೆಜ** ಬಂದರವೂ ಉಂಟು

ಯುರೋಪದೊಳಗಿನ ದೇಶಗಳಿಗೂ ಹಿಂದುಸ್ಥಾನ, ಚೀನ ಮುಂತಾದ ಏಶಿಯದೊಳಗಿನ ದೇಶಗಳಿಗೂ ನಡೆಯುವ ವ್ಯಾಪಾರವು ಇಜಿಪ್ತದ ಮಾರ್ಗವಾಗಿ ಸಾಗುತ್ತದೆ. ದೊಡ್ಡದೊಡ್ಡ ಹಡಗಗಳು ಭೂಮಧ್ಯ ಸಮುದ್ರದೊಳಗಿಂದ ಸುಯೆಜದ ಕಾಲುವೆಯ ಮಾರ್ಗದಿಂದ ಕೆಂಪುಸಮುದ್ರಕ್ಕೆ ಬರುತ್ತವೆ; ಅಥವಾ ವರ್ತಕರು ಅಲೆಕ್‌ಜಾಂದ್ರಿಯಾದಲ್ಲಿ ತಮ್ಮ ಸರಕುಗಳನ್ನು ಇಳಿಸಿ, ಉಗಿಬಂಡಿಯಿಂದ ಕಾಯರೋ ಪಟ್ಟಣಕ್ಕಾಗಲಿ, ಸುಯೆಜಕ್ಕಾಗಲಿ ಕಳಿಸುತ್ತಾರೆ.

---

* ನೋಹಾ ಎಂಬ ನಾವಿಕನ ಮೊಮ್ಮಗನಾದ ಮಿಸರನೆಂಬವನು ಕೆಳಗಿನ ಇಜಿಪ್ತವನ್ನು ಸ್ಥಾಪಿಸಿದ್ದರಿಂದ ಈ ದೇಶಕ್ಕೆ ಮಿಸರವೆಂಬ ಹೆಸರು ಬಂದದೆ.

ಈ ದೇಶದಲ್ಲಿ, ನೈಲವು ಮುಖ್ಯ ಹೊಳೆಯುಂಟು. ❀ ಈ ಹೊಳೆಯು ವಿಕ್ಟೋರಿಯಾನ್ಯಾಂಜಾ ಅಲ್ಬರ್ತನ್ಯಾಂಜಾ ಎಂಬ ದೊಡ್ಡ ಸರೋವರಗಳಿಂದ ಹೊರಟು ಉತ್ತರಕ್ಕೆ ಹರಿಯುತ್ತದೆ. ಅದು ಕೆಲವು ದೂರದ ವರೆಗೆ ಹರಿದು ಹೋದ ಬಳಿಕ ಬ್ಲೂನೈಲ, ಅತ್ಬಾರಾ ಎಂಬೆರಡು ದೊಡ್ಡ ಹೊಳೆಗಳು ಅಬಿಸೀನಿಯಾ ದೇಶದಿಂದ ಬಂದು ನ್ಯೂಬಿಯಾ ಪ್ರಾಂತದಲ್ಲಿ ಅದಕ್ಕೆ ಕೂಡುತ್ತವೆ. ಮುಂದೆ ನೈಲವು ಎರಡು ಮುಖಗಳಿಂದ ರೋಸೆತ್ತಾ, ದಾಮಿಯೆತಾ ಎಂಬ ಪಟ್ಟಣಗಳ ಹತ್ತರ ಭೂಮಧ್ಯಸಮುದ್ರಕ್ಕೆ ಕೂಡುತ್ತದೆ. ಇವೆರಡು ಮುಖಗಳ ನಡುವಿನ ಭೂಮಿಯು ಬಹಳ ಬೆಳೆಯುಳ್ಳದ್ದುಂಟು. ನಿಜ ಇಜಿಪ್ತದ ಭೂಮಿಯಾದರೂ ಬಹಳ ಬೆಳೆಯುಳ್ಳದ್ದಿರುತ್ತದೆ. ಅಲ್ಲಿ ಮಳೆ ಬಹಳ ಆಗುವದಿಲ್ಲ; ಆದರೆ ನೈಲನದಿಯ ಉಗಮದ ಹತ್ತರ ಬಹಳ ಮಳೆಯಾಗುವ ಕಾರಣ ಆ ನದಿಯು ವರ್ಷ ವರ್ಷ ತುಂಬಿ, ನೀರು ಹೊರಚಲ್ಲಿ ಎರಡೂ ಕಡೆಯಲ್ಲಿ ಬಹಳ ದೂರದವರೆಗೆ ಹೋಗುತ್ತದೆ. ಆ ಕಾರಣ ಆ ನದಿಯ ದಂಡೆಯ ಪ್ರದೇಶಗಳಲ್ಲಿ ಮೇಲಾದ ಬೆಳೆ ಬರುತ್ತದೆ. ನ್ಯೂಬಿಯಾ ಮುಂತಾದ ದಕ್ಷಿಣ ಪ್ರಾಂತಗಳಲ್ಲಿ ಇಜಿಪ್ತದಷ್ಟು ಭೂಮಿಯು ಬೆಳೆಯುವದಿಲ್ಲ; ಅವುಗಳಲ್ಲಿ ಉಸುಬಿನ ದೊಡ್ಡ ದೊಡ್ಡ ಬೈಲುಗಳಿರುತ್ತವೆ.

ಈ ದೇಶವು ಬಹು ಪುರಾತನ ಕಾಲದಿಂದ ವಿದ್ಯಾಚಾರಸಂಪನ್ನವಾದ ದೇಶಗಳಲ್ಲಿ ಎಣಿಸಲ್ಪಡುತ್ತದೆ. ಇದರಲ್ಲಿ ಬೇರೆ ಬೇರೆ ರಾಜವಂಶಗಳು ಬಹುಕಾಲ ಆಳಿದವು. ಈಗ ಈ ದೇಶದ ಅರಸನು ಮುಸಲಮಾನನಿರುತ್ತಾನೆ. ಅವನಿಗೆ ಖೇದಿವ್--ಎಲ್--ಮಿಸರ ಎಂಬ ಅಭಿಧಾನವುಂಟು. ಆವನು ಮೊದಲು ಹೆಸರಿಗೆ ತುರ್ಕೀದೇಶದ ಸುಲ್ತಾನನ ಮಾಂಡಲಿಕನಾಗಿದ್ದರೂ ಸ್ವತಂತ್ರದಿಂದ ನಡೆಯುತ್ತಿದ್ದನು. ಈಗ ಇಂಗ್ಲೀಷರು ಖೇದೀವನ ಮಂತ್ರಿಗಳಾಗಿ ಕಾರಭಾರ ಮಾಡುತ್ತಾರೆ. ನಿಜ ಇಜಿಪ್ತದ ನಿವಾಸಿಗಳೂ ನ್ಯೂಬಿಯಾ ಪ್ರಾಂತದವರೂ ಮುಸಲ್ಮಾನರುಂಟು. ಅವರು ಅರಬೀಭಾಷೆಯನ್ನು

❀ ಈ ಹೊಳೆಯ ಉದ್ದಳತೆಯು ೩,೦೦೦ ಮೈಲು. ಆದರೆ ಉತ್ತರ ಅಮೇರಿಕದಲ್ಲಿದ್ದ ಮಿಸ್ಸೂರಿ ಹೊಳೆಯ ಉದ್ದಳತೆಯು ೪,೦೦೦ ಮೈಲಿದೆ.

ಆಡುತ್ತಾರೆ. ಆದರೆ ನಿಜ ಇಜಿಪ್ತದಲ್ಲಿ ವಾಸಿಸುವ ಕ್ರಿಸ್ತೀ ಜನರು ಮೂಲನಿವಾಸಿಗಳ ವಂಶದವರೆಂದು ಹೇಳುತ್ತಾರೆ. ಈ ದೇಶದೊಳಗಿನ ಮುಸಲ್ಮಾನರು ಅರಬರ ವಂಶದವರೂ ಮೂಲ ನಿವಾಸಿಗಳ ವಂಶದವರೂ ಇರುತ್ತಾರೆ. ನ್ಯೂಬಿಯದ * ದಕ್ಷಿಣಕ್ಕೂ ಕಾರ್ದೋಫಾನ ಪ್ರಾಂತದಲ್ಲಿಯೂ ಸಿದ್ದೀ ಜನರು ವಾಸಿಸುತ್ತಾರೆ. ಎಷ್ಟೋ ಸಿದ್ದೀ ಜನರನ್ನು ನಿಜ ಇಜಿಪ್ತದಲ್ಲಿಯೂ ನ್ಯೂಬಿಯದ ಉತ್ತರ ಭಾಗದಲ್ಲಿಯೂ ಗುಲಾಮರನ್ನು ಮಾಡಿ ಒಯ್ದಿರುತ್ತಾರೆ.

**ವ್ಯಾಪಾರದ ಜೀನಸುಗಳು:**—ಇಲ್ಲಿಂದ ಮುಖ್ಯವಾಗಿ ಧಾನ್ಯಗಳು, ತಂಬಾಕ ಅರಳೆ ಮುಂತಾದವುಗಳು ಪರಸ್ಥಳಕ್ಕೆ ಹೋಗುತ್ತವೆ. ಮಧ್ಯಆಫ್ರಿಕದಿಂದ ಕಾರವಾನರು ಆನೆಹಲ್ಲು, ಬಂಗಾರದ ಮಣ್ಣು, ಚರ್ಮ, ಶಹಾಮೃಗದ ಗರಿಗಳು ಮುಂತಾದವುಗಳನ್ನು ಈ ದೇಶಕ್ಕೆ ತರುತ್ತಾರೆ.

ಇಜಿಪ್ತದಲ್ಲಿ ಪಿರಮಿಡ ಎಂಬ ಪರ್ವತಪ್ರಾಯವಾದ ನೆಲಗೋಪುರಗಳು ನೋಡತಕ್ಕಂಥವಿರುತ್ತವೆ. ಅವು ಪೂರ್ವಕಾಲದ ಅರಸರ ಗೋರಿಗಳುಂಟು.

ಇಜಿಪ್ತದ ಖೇದಿವನು ಒಳಡೆಯಲ್ಲಿ ಸೌದನದ ಕೆಲವು ಭಾಗವನ್ನು ಗೆದ್ದುಕೊಂಡಿದ್ದನು. ಮುಂದೆ ಮಹಾದಿ ಎಂಬವನು ಬಂಡು ಮಾಡಿ ನಿಜ ಇಜಿಪ್ತ ಹೊರತಾಗಿ ಉಳಿದ ಎಲ್ಲ ಪ್ರಾಂತಗಳನ್ನು ಖೇದಿವನಿಂದ ಕಸುಗೊಂಡನು. ೧೮೯೮ ರಲ್ಲಿ ಇಂಗ್ಲಿಷರು ಮಹಾದಿಯ ತರುವಾಯ ಪಟ್ಟಕ್ಕೆ ಬಂದ ಖಲಿಫಾನನ್ನು ಪೂರ್ಣವಾಗಿ ಸೋಲಿಸಿದರು. ೧೮೯೮ ರಲ್ಲಿ ಇಜಿಪ್ತಕ್ಕೂ ಇಂಗ್ಲಿಷರಿಗೂ ಒಪ್ಪಂದವಾಗಿ ಇಜಿಪ್ತಕ್ಕೆ ಸೇರಿದ ಸೌದನದ ಭಾಗವೆಲ್ಲ ಒಬ್ಬ ಇಂಗ್ಲಿಷ ಗವರ್ನರ ಜನರಲ್ಲನ ವಶಕ್ಕೆ ಕೊಡಲ್ಪಟ್ಟಿತು. ಆದಕ್ಕೆ ಈಗ ಆಂಗ್ಲೋ ಇಜಿಪ್‌ಶಿಯನ್ ಸೌದನ ಎಂದು ಅನ್ನುತ್ತಾರೆ.

**ಆಂಗ್ಲೊ ಇಜಿಪ್‌ಶಿಯನ್-ಸೌದನ:**-ಇದರಲ್ಲಿ ನ್ಯೂಬಿಯಾ ಕಾರ್ದೋಫಾನ, ದಾರಫರ ಮೊದಲಾದ ಪ್ರಾಂತಗಳು ಬರುತ್ತವೆ.

---

* ನ್ಯೂಬಿಯಾದ ಮೂಲ ನಿವಾಸಿಗಳಿಗೆ ಇಥಿಯೋಪಿಯನ್ ಎಂಬ ಹೆಸರಿತ್ತು. ಅವರು ಇಜಿಪ್ತದ ಮೂಲ ನಿವಾಸಿಗಳ ಹಾಗೇ ಇದ್ದರು.

**ಪಟ್ಟಣಗಳು:**—ನ್ಯೂಬಿಯಾದಲ್ಲಿರುವ **ಖಾರ್ತೂಮ** ಎಂಬದು ಈ ಪ್ರಾಂತದ ಮುಖ್ಯ ಪಟ್ಟಣವಾಗಿದೆ; ಅದು ಬಿಳೀ, ನೀಲಿ ನೈಲಗಳ ಸಂಗಮದ ಹತ್ತರ ಇರುತ್ತದೆ. ಅದರ ಹತ್ತರ **ಓಮ್ದರ್ಮನ** ಎಂಬದು ಮಹಾದಿಯ ರಾಜಧಾನಿಯಾಗಿತ್ತು. ನೀಲಿ ನೈಲನದಿಯ ಧಡದಲ್ಲಿ **ಸನಾರ** ಎಂಬದು ಮೊದಲು ಒಂದು ಸ್ವತಂತ್ರರಾಜ್ಯದ ರಾಜಧಾನಿಯಾಗಿತ್ತು. **ಕೋಬೀ** ಪಟ್ಟಣವು ದರಫರ ಪ್ರಾಂತದಲ್ಲಿದೆ.

## ೨. ಅಬಿಸೀನಿಯ ದೇಶವು.

ಅಬಿಸೀನಿಯ ಅಥವಾ ಹಬಸ ಎಂಬ ದೇಶವು ಇಜಿಪ್ತದ ಆಗ್ನೇಯಕ್ಕಿರುತ್ತದೆ. ಇದರಲ್ಲಿ ಗುಡ್ಡಗಳು ಬಹಳ. ಇದರ ದಕ್ಷಿಣಕ್ಕೆ ಸೋಮಾಲೀ, ಗಾಲಾ ಎಂಬ ಜನರ ನಾಡುಗಳುಂಟು. ಈ ದೇಶದ ಪೂರ್ವ ದಂಡೆಯ ಭಾಗವು ಇಜಿಪ್ತದ ರಾಜ್ಯಕ್ಕೆ ಸೇರಿರುತ್ತದೆ.

**ಪಟ್ಟಣಗಳು:**—**ಗೊಂಡಾ**ರೆಂಬ ಮುಖ್ಯ ಪಟ್ಟಣವು ಮಧ್ಯಭಾಗದಲ್ಲಿರುತ್ತದೆ. ಕೆಂಪುಸಮುದ್ರದ ದಂಡೆಯಲ್ಲಿ **ಮಸೂವಾ** ಎಂಬ ದೊಡ್ಡ ಬಂದರವು ಇಟಾಲಿಯ ರಾಜ್ಯಕ್ಕೆ ಸೇರಿರುತ್ತದೆ. **ಮಾಗದಾಲ**ಎಂಬದೊಂದು ಭದ್ರವಾದ ದುರ್ಗಕೋಟೆಯುಂಟು ಅದನ್ನು ಇಂಗ್ಲೀಷರು ಸನ್ನ೧೮೬೮ನೆಯ ವರ್ಷ ಗೆದ್ದುಕೊಂಡರು.

**ಹೊಳೆಗಳು:**—ಬ್ಲೂನೈಲ, ಆತ್‌ಬಾರಾ ಎಂಬ ನದಿಗಳು ಅಬಿಸೀನಿಯದ ಪರ್ವತಗಳಲ್ಲಿ ಉಗಮವಾಗಿ ಉತ್ತರಕ್ಕೆ ಹರಿದು ನೈಲನದಿಗೆ ಕೂಡುತ್ತವೆ.

ಈ ದೇಶದಲ್ಲಿ ಹಲವು ಸಣ್ಣ ಸಣ್ಣ ಸ್ವತಂತ್ರ ಸಂಸ್ಥಾನಗಳಿದ್ದು ಅವು ತಮ್ಮ-ತಮ್ಮೊಳಗೆ ಕಲಹವನ್ನು ಕೆದರುತ್ತಿದ್ದವು. ಆದರೆ ಅವೆಲ್ಲ ಈಗ ಒಬ್ಬನೇ ಅರಸನ ಅಧಿಕಾರಕ್ಕೆ ಒಳಗಾಗಿವೆ. ಈ ಅರಸನಿಗೆ ನೀಗಸ ಅಂದರೆ ರಾಜರಾಜನೆಂಬ ಬಿರುದುಂಟು. ಇಲ್ಲಿಯ ಭೂಮಿಯು ಬೆಳೆಯುಳ್ಳದ್ದಿರುತ್ತದೆ. ಧಾನ್ಯಗಳು, ಬುಂದು, ಹತ್ತಿ ಮುಂತಾದವುಗಳು ಚನ್ನಾಗಿ ಬೆಳೆಯುತ್ತವೆ. ನೀರು ವಿಪುಲವಿರುತ್ತದೆ; ಅಡವಿಗಳು ಬಹಳುಂಟು.

ಈ ದೇಶದ ನಿವಾಸಿಗಳು, ಇಥಿಯೋಪಿಯನ್, ಅರಬ, ಯಹೂದಿ, ಸಿದ್ದೀ ಮುಂತಾದ ಜನಾಂಗಗಳ ವಂಶದವರಿರುತ್ತಾರೆ. ಅವರು ಮುಖ್ಯವಾಗಿ ಆಹ್ಮಾರಿ ಎಂಬ ಭಾಷೆಯನ್ನು ಆಡುತ್ತಾರೆ. ಕ್ರಿಸ್ತೀಧರ್ಮವೇ ಜನರ ಮುಖ್ಯ ಧರ್ಮವು; ಆದರೆ ಅವರ ನಡೆನುಡಿಗಳು ಸರಿಯಾಗಿರುವದಿಲ್ಲ.

## ೩. ಬಾರ್ಬರೀ ಸಂಸ್ಥಾನಗಳು.

ಈ ಸಂಸ್ಥಾನಗಳು ಭೂಮಧ್ಯಸಮುದ್ರದ ದಕ್ಷಿಣತೀರದಲ್ಲಿ ಇರುತ್ತವೆ; ಇವುಗಳ ಪೂರ್ವಕ್ಕೆ ಇಜಿಪ್ತ ದೇಶವೂ, ಪಶ್ಚಿಮಕ್ಕೆ ಅತ್‌ಲಾಂತಿಕ ಮಹಾಸಾಗರವೂ ಉಂಟು.

ಈ ಸಂಸ್ಥಾನಗಳು ನಾಲ್ಕು ಇರುತ್ತವೆ; ೧. ತ್ರಿಪೋಲಿ, ೨. ತೂನಿಸ, ೩. ಅಲ್‌ಜೀರಿಯಾ, ೪ ಮೊರೋಕ್ಕೊ.

ತ್ರಿಪೋಲಿ:—ಈ ಸಂಸ್ಥಾನದಲ್ಲಿ ತ್ರಿಪೋಲಿ, ಬಾರ್ಕಾ ಎಂಬ ಪ್ರಾಂತಗಳೂ ಉಸುಬಿನ ಬೈಲೊಳಗಿರುವ ಫಜಾನ ಎಂಬ ಬೆಳೆಯುಳ್ಳ ಪ್ರದೇಶವೂ ಉಂಟು. ಈ ಸಂಸ್ಥಾನವು ತುರ್ಕೀರಾಜ್ಯದಲ್ಲಿ ಒಂದು ಪ್ರಾಂತವಾಗಿತ್ತು; ಆದರೆ ೧೯೧೨ರಲ್ಲಿ ಇತಾಲಿಗೂ ತುರ್ಕಿಗೂ ಯುದ್ಧವಾಗಿ ತ್ರಿಪೋಲಿಯು ಇತಾಲಿಯ ಕೈಸೇರಿತು. ಈ ಸಂಸ್ಥಾನದ ರಾಜಧಾನಿಯು ತ್ರಿಪೋಲಿ ಎಂಬ ಪಟ್ಟಣವದೆ.

ತೂನಿಸ:—ಈ ಸಂಸ್ಥಾನದ ಒಡೆಯನಿಗೆ ಬೇ ಎಂಬ ಅಭಿಧಾನವದೆ. ಅವನು ಮೊದಲು ತುರ್ಕಿಗೆ ಅಂಕಿತನಾಗಿದ್ದನು. ಆದರೆ ಈಗ ಅವನು ಫ್ರೆಂಚರ ರಕ್ಷಣೆಗೆ ಒಳಗಾಗಿದ್ದಾನೆ. ಈ ಸಂಸ್ಥಾನದ ರಾಜಧಾನಿಯಾದ ತೂನಿಸ ಪಟ್ಟಣವು ದೊಡ್ಡದದೆ. ಅಲ್ಲಿ ವ್ಯಾಪಾರವು ಬಹಳ ನಡೆಯುತ್ತದೆ. ಈ ಪಟ್ಟಣದ ಹತ್ತರ ಪುರಾತನಕಾಲದಲ್ಲಿ ಪ್ರಖ್ಯಾತವಾದ ಕಾರ್ಥೇಜ ಎಂಬ ಪಟ್ಟಣದ ಹಾಳು ಬೀದಿಯು ಇರುತ್ತದೆ.

ಅಲ್‌ಜೀರಿಯಾ:—ಈ ಸಂಸ್ಥಾನವು ಫ್ರಾನ್ಸದ ರಾಜ್ಯಕ್ಕೆ ಸೇರಿದೆ. ಅಲ್‌ಜೀರ್ಸ ಎಂಬ ಪಟ್ಟಣವು ಇದರ ರಾಜಧಾನಿ

ಯುಂಟು. ಎರಡನೆಯದೊಂದು **ಕಾನಸ್ತಂತೈನ್** ಎಂಬ ಹೆಸರಿನ ದೊಡ್ಡ ಪಟ್ಟಣವದೆ.

**ಮೊರೋಕ್ಕೋ:**—ಈ ಸಂಸ್ಥಾನದ ಒಡೆಯನಿಗೆ **ಸುಲ್ತಾನ** ನೆನ್ನುವರು. **ಮೊರೋಕ್ಕೋ** ಪಟ್ಟಣವೇ ಅವನ ರಾಜಧಾನಿಯು. **ಫೇಜ** ಎಂಬ ಪಟ್ಟಣದಲ್ಲಿ ಕರಿಹಾಸಿದ ಚರ್ಮವು ಮೇಲಾದದು ದೊರೆಯುತ್ತದೆ. ಅದಕ್ಕೆ **ಮೊರೋಕ್ಕೋಲೆದರ** ಎಂಬ ಹೆಸರುಂಟು. **ತಾಂಜೀರ, ತೇತುವಾನ** ಎಂಬ ಬಂದರಗಳು ಜಿಬ್ರಾಲ್ತರ ಸಾಮುದ್ರಧುನಿಯ ದಂಡೆಯ ಮೇಲೆ ಇರುತ್ತವೆ. ಜಿಬ್ರಾಲ್ತರ ಕೋಟೆಯ ಎದುರಿಗೆ ಈ ಸಂಸ್ಥಾನದಲ್ಲಿ **ಕ್ಯೂತಾ** ಎಂಬದೊಂದು ಭದ್ರವಾದ ದುರ್ಗ ಕೋಟೆಯುಂಟು. ಪ್ರಾಚೀನಕಾಲದಲ್ಲಿ **ಹಕ್ಯೂರ್ಲಿಸನ ಸ್ತಂಭಗಳೆಂಬ** ಹೆಸರಿನಿಂದ ಪ್ರಸಿದ್ಧವಾಗಿದ್ದಂಥ ಎರಡುಗುಡ್ಡಗಳಲ್ಲಿ ಒಂದು ಈ ಕೋಟೆ ಇರುವ ಗುಡ್ಡವು ಇರುತ್ತದೆ. ಈ ಕೋಟೆಯೂ **ತೇತುವಾನೆಂಬ** ಬಂದರವೂ ಸ್ಪೇನದ ರಾಜ್ಯಕ್ಕೆ ಸೇರಿರುತ್ತವೆ.

ಬಾರ್ಬರೀ ಸಂಸ್ಥಾನಗಳ ಭಾಗಗಳು ದಕ್ಷಿಣ ದಿಕ್ಕಿನಲ್ಲಿ ಸಹಾರಾ ಎಂಬ ದೊಡ್ಡ ಉಸುಬಿನ ಬೈಲೊಳಗೆ ಹೋಗಿರುತ್ತವೆ. ಪಶ್ಚಿಮದಲ್ಲಿ ಈ ಸಂಸ್ಥಾನಗಳಿಗೂ ಆ ಬೈಲಿಗೂ ನಡುವೆ **ಅತ್‌ಲಸ** ಎಂಬ ಪರ್ವತಾವಳಿಯು ಪೂರ್ವಕ್ಕೆ ಹೋಗಿರುತ್ತದೆ.

**ಆಖಾತಗಳು:**—ಸಿಂದ್ರಾ, ಕೆಬ್ಸ ಎಂಬ ಆಖಾತಗಳು ಮುಖ್ಯ ಉಂಟು.

**ಭೂಶಿರಗಳು:**—ಕೇಪಬೋನ, ಕೇಪಸ್ಪಾರ್ತೆಲ್ ಎಂಬ ಭೂಶಿರಗಳು ಪ್ರಸಿದ್ಧವುಂಟು.

ಅತ್‌ಲಸಪರ್ವತದ ಉತ್ತರಕ್ಕಿರುವ ತಗ್ಗು ಭೂಮಿಯಲ್ಲಿ ಧಾನ್ಯಗಳು ಬಹಳ ಬೆಳೆಯುತ್ತವೆ. ಆ ಪರ್ವತದ ಇಳುಕಲಿನ ಮೇಲೆ ಉತ್ತುತ್ತಿ ಮುಂತಾದ ಫಲವೃಕ್ಷಗಳು ಬಹಳ ಬೆಳೆಯುತ್ತವೆ. ಆ ಗುಡ್ಡಗಳಲ್ಲಿ ಲೋಹಗಳ ಕಣಿಗಳು ಇರುತ್ತವೆ.

**ವ್ಯಾಪಾರದ ಜಿನಸುಗಳು:**—ಈ ಸಂಸ್ಥಾನಗಳಿಂದ ಕುದುರೆಗಳು, ಫಲಗಳು, ಧಾನ್ಯಗಳು, ತಂಬಾಕ, ಚರ್ಮ, ಉಪ್ಪು, ತಾಮ್ರ,

ಬೆಳ್ಳಿ ಮುಂತಾದ ಪದಾರ್ಥಗಳು ಪರಸ್ಥಳಕ್ಕೆ ಹೋಗುತ್ತವೆ. ಈ ಸಂಸ್ಥಾನಗಳ ನಿವಾಸಿಗಳು ಅರಬ ಕುಲದವರುಂಟು.

## ೨. ಸಹಾರಾ ಅರಣ್ಯವು.

ಇದು ಬಾರ್ಬರೀ ಸಂಸ್ಥಾನಗಳ ದಕ್ಷಿಣಕ್ಕಿರುತ್ತದೆ. ಇದರ ಪೂರ್ವಕ್ಕೆ ಇಜಿಪ್ತ ದೇಶವೂ, ಪಶ್ಚಿಮಕ್ಕೆ ಅತ್ಲಾಂತಿಕ ಮಹಾ ಸಾಗರವೂ ಉಂಟು. ಈ ಬೈಲಿನೊಳಗೆ ಕೆಲಕೆಲವು ಕಡೆಯಲ್ಲಿ ನೀರುಳ್ಳ ಪ್ರದೇಶಗಳಿರುತ್ತವೆ. ಅಲ್ಲಿ ಬೆಳೆಯಾದರೂ ತಕ್ಕಷ್ಟಿಗೆ ಬರುತ್ತದೆ. ಕಾರವಾನರು ಒಂಟೆಗಳ ಮೇಲೆ ಕೂತು ಇಂಥಾ ಅರ್ಥತ್ತವುಳ್ಳ ಮಾರ್ಗಗಳಿಂದ ಈ ಬೈಲಿನೊಳಗೆ ಪ್ರವಾಸ ಮಾಡಿ ಬಾರ್ಬರೀ ಸಂಸ್ಥಾನಗಳಿಗೂ ಸೌದನ ದೇಶಕ್ಕೂ ವ್ಯಾಪಾರ ನಡಿಸುತ್ತಾರೆ. ಫಜಾನದ ಬೆಳೆಯುಳ್ಳ ಪ್ರದೇಶವು ಈ ಬೈಲಿನಲ್ಲಿ ಇರುತ್ತದೆ. ಇದರಲ್ಲಿ ವಾಸಿಸುವ ಜನರು ಬಾರ್ಬರೀ ಸಂಸ್ಥಾನಗಳ ನಿವಾಸಿಗಳಂಥವರು ಇರುತ್ತಾರೆ. ಅವರು ಮುಸಲ್ಮಾನೀ ದರ್ಮಕ್ಕೆ ಸೇರಿದವರು. ಈ ಅರಣ್ಯದ ಪಶ್ಚಿಮದ ಅರ್ಧವು ಈಗ ಫ್ರೆಂಚರ ವಶದಲ್ಲಿರುತ್ತದೆ.

## ೩ ಸೌದನ, ಉರ್ಫ ನಿಗ್ರೀಶಿಯಾ.

ಈ ದೇಶವು ಸಹಾರಾ ಅರಣ್ಯದ ದಕ್ಷಿಣಕ್ಕಿರುತ್ತದೆ. ಇದರ ಪಶ್ಚಿಮಕ್ಕೆ ಸೆನಿಗಾಂಬಿಯಾ ದೇಶವೂ, ಪೂರ್ವಕ್ಕೆ ನೈಲನದಿಯು ಪ್ರದೇಶವೂ ಉಂಟು.

ಈ ದೇಶದಲ್ಲಿ ಹಲವು ಸಂಸ್ಥಾನಗಳುಂಟು, ಪೂರ್ವಕ್ಕೆವಾದಾಯಿ ಎಂಬದು ಕಾನೆಮ, ಬಾಗಿಮಿರಿ ಸಹಿತವಾಗಿ ಒಬ್ಬಸಿದ್ದೀ ಸುಲ್ತಾನನಿಗೆ ಆಧೀನವಾದ ಸ್ವತಂತ್ರ ರಾಜ್ಯವಾಗಿದೆ. ಸೌದನದ ಉಳಿದಭಾಗವೆಲ್ಲ ಫ್ರೆಂಚರ ಇಲ್ಲವೆ ಇಂಗ್ಲಿಷರ ಸೀಮೆಯಾಗಿದೆ. ಫ್ರೆಂಚರ ಸೀಮೆಯು ಆಲ್ಜೀರಿಯಾದಿಂದ ನೈಜರ ನದಿಯು ವರೆಗೆ ಇರುತ್ತದೆ. ನೈಜೆರಿಯವೂ ಇಜಿಪ್ಶಿಯನ್ ಸೌದನವೂ ಇಂಗ್ಲಿಷರ ಸೀಮೆಗಳಾಗಿವೆ.

**ಪಟ್ಟಣಗಳು:—ಸೇಗೊ, ತಿಂಬಕ್ತೂ, ಬೂಸಾ** ಎಂಬ ಪಟ್ಟಣಗಳು ನೈಜರನದಿಯ ಧಡದಲ್ಲಿ ಇರುತ್ತವೆ. **ಕೂಕಾ,**

ಸೊಕೊತೊ ಎಂಬ ಪಟ್ಟಣಗಳು ನೈಜರ ನದಿಯ ಪ್ರಾಂತದಲ್ಲಿ ಚಾದ ಸರೋವರದ ದಂಡೆಯಲ್ಲಿ ಇರುತ್ತವೆ.

**ಹೊಳೆಗಳು:**—ನೈಜರ ಉರ್ಫ ಜೋಲಿಬಾ ಉರ್ಫ ಕ್ವೋರಾ ಎಂಬ ಹೊಳೆಯು ಕೋಂಗಪರ್ವತದಲ್ಲಿ ಉಗಮವಾಗಿ, ವರ್ತುಳ ಗತಿಯಿಂದ ಸೌದನ ದೇಶದಲ್ಲಿಯೂ ಮೇಲಿನ ಗಿನಿಯಲ್ಲಿಯೂ ಹರಿದು, ಗಿನಿಯ ಅಖಾತಕ್ಕೆ ಕೂಡುತ್ತದೆ. ಚದ್ದಾ ಎಂಬ ಹೊಳೆಯು ನೈಜರನದಿಗೆ ಎಡಗಡೆಯಿಂದ ಬಂದು ಕೂಡುತ್ತದೆ.

**ಸರೋವರಗಳು:**—ಚಾದ ಸರೋವರವು ಮುಖ್ಯವುಂಟು. ತಾರಿ ಮುಂತಾದ ಹೊಳೆಗಳು ಈ ಸರೋವರಕ್ಕೆ ಕೂಡುತ್ತವೆ.

**ಪರ್ವತಗಳು:**—ಈ ದೇಶದ ದಕ್ಷಿಣ ಮೇರೆಯಲ್ಲಿ ಕೊಂಗ ಪರ್ವತವಿರುತ್ತದೆ; ದಕ್ಷಿಣದಲ್ಲಿ ಚದ್ದಾ ನದಿಯ ಉಗಮದ ಹತ್ತರ ಅತ್‌ಲಾಂತಿಕಾ ಎಂಬ ಪರ್ವತವದೆ.

ಸೌದನ ದೇಶವು ಸಿದ್ದೀಜನರ ಮೂಲಸ್ಥಾನವದೆ. ಇವರು ಮೂರ್ತಿಗಳನ್ನು ಪೂಜಿಸುತ್ತಾರೆ. ಆದರೆ ಈಗ ಬಹು ಜನರು ಮುಸಲ್ಮಾನರಾಗುತ್ತಲಿದ್ದಾರೆ.

## ೪. ಪಶ್ಚಿಮ ಆಫ್ರಿಕ.

ಬಾರ್ಬರೀ ಸಂಸ್ಥಾನಗಳ ದಕ್ಷಿಣಕ್ಕೆ ಸಹಾರಾ ಎಂಬ ದೊಡ್ಡ ಬೈಲು ಇರುತ್ತದೆ. ಅದರ ದಕ್ಷಿಣಕ್ಕೆ ಪಶ್ಚಿಮ ದಂಡೆಯಲ್ಲಿ ರಿಯೋದಿ ಆರೋ, ಸೇನಿಗಾಂಬಿಯಾ, ಮೇಲಿನ ಗಿನಿ, ಕೆಳಗಿನ ಗಿನಿ ಎಂಬ ನಾಲ್ಕು ದೇಶಗಳಿರುತ್ತವೆ.

## ೧. ರಿಯೋದಿ ಆರೋ.

ಇದು ಸ್ಪೇನದ ರಕ್ಷಣೆಗೆ ಒಳಗಾಗಿದೆ. ಇದು ಉತ್ತರದಲ್ಲಿ ಮೊರೊಕ್ಕೊದಿಂದ ದಕ್ಷಿಣದಲ್ಲಿ ಕೆಪ್‌ಬ್ಲಾಂಕೋದ ವರೆಗೆ ಇರುತ್ತದೆ; ಪೂರ್ವಕ್ಕೆ ಸಹಾರಾ ಅರಣ್ಯಕ್ಕೆ ಹತ್ತಿರುತ್ತದೆ.

## ೨. ಸೆನಿಗಾಂಬಿಯಾ ದೇಶವು.

ಇದರ ಪೂರ್ವಕ್ಕೆ ಸಿದ್ದೀ ಜನರ ಸೌದನೆಂಬ ದೇಶವಿರುತ್ತದೆ.

**ಭೂಶಿರ:**—ಕೇಪವರ್ದ ಎಂಬ ಭೂಶಿರವು ಆಫ್ರಿಕದ ಪಶ್ಚಿಮಬಿಂದುವಿರುತ್ತದೆ.

**ಹೊಳೆಗಳು:**—ಈ ದೇಶದಲ್ಲಿ ಸೆನಿಗಾಲ, ಗಾಂಬಿಯಾ ಎಂಬ ಎರಡು ಹೊಳೆಗಳು ಮುಖ್ಯವುಂಟು. ಅದರಿಂದ ಈ ದೇಶಕ್ಕೆ ಸೆನಿಗಾಂಬಿಯಾ ಎಂಬ ಹೆಸರು ಬಂದದೆ. ರಿಯೋಗ್ರಾಂದ ಎಂಬದೊಂದು ಮೂರನೆಯ ಹೊಳೆಯುಂಟು. ಈ ಮೂರು ಹೊಳೆಗಳು ಸೆನಿಗಾಂಬಿಯಾ ಸೌದನ ದೇಶಗಳಲ್ಲಿಯ ಪರ್ವತಗಳಲ್ಲಿ ಉಗಮವಾಗಿರುತ್ತವೆ.

ಸೆನಿಗಾಂಬಿಯಾ ದೇಶದಲ್ಲಿ ಮುಸಲ್ಮಾನ ಧರ್ಮವು ನಡೆಯುತ್ತದೆ. ನಿವಾಸಿಗಳು ಸಿದ್ದೀ ಜನರಿಗಿಂತ ಹೆಚ್ಚಿಗೆ ಸುಧಾರಿಸಿದವರುಂಟು. ಈ ದೇಶದ ದೊಡ್ಡ ಭಾಗವು ಸೆನಿಗಾಲ ಎಂಬ ಫ್ರೆಂಚರ ವಸಹಾತಿನಲ್ಲಿ ಬರುತ್ತದೆ. ಅದರ ರಾಜಧಾನಿಯು **ಸೇಂತಲುಯಿ** ಎಂಬ ಪಟ್ಟಣವದೆ. ಗಾಂಬಿಯಾ ನದಿಯ ಮುಖದ ಹತ್ತರ **ಬಾಥರ್ಸ್ಟ** ಎಂಬದೊಂದು ಇಂಗ್ಲಿಷರ ವಸಹಾತು ಇರುತ್ತದೆ.

## ೩. ಮೇಲಿನ ಗಿನಿ ದೇಶವು.

ಈ ದೇಶವು ಸೆನಿಗಾಂಬಿಯಾದಿಂದ ಫ್ರೆಂಚಕಾಂಗೋದ ವರೆಗೆ ಇರುತ್ತದೆ.

**ಹೊಳೆಗಳು:**—ಜೋಲಿಬಾ ಉರ್ಫ ನೈಜರ ಎಂಬ ಹೊಳೆಯು ಸೌದನ ದೇಶದಿಂದ ಬಂದು ಎರಡು ಮುಖಗಳಿಂದ ಗಿನಿಯ ಆಖಾತಕ್ಕೆ ಕೂಡುತ್ತದೆ.

**ಆಖಾತಗಳೂ ಉಪಸಾಗರಗಳೂ:**— ಗಿನಿಯ ಆಖಾತವು ದಕ್ಷಿಣದಲ್ಲಿ ಇರುತ್ತದೆ. ಬಾಯಿತ ಆಫ್ ಬೆನಿನ್, ಬಾಯಿತ ಆಫ್ ಬಿಯಾಫ್ರಾ ಎಂಬ ಉಪಸಾಗರಗಳಾದರೂ ದಕ್ಷಿಣ ದಂಡೆಯಲ್ಲಿಯೇ ಇರುತ್ತವೆ.

ನೈಜರ ನದಿಯ ಮುಖದ ವರೆಗೆ ಪಶ್ಚಿಮ ದಂಡೆಯ ಪ್ರದೇಶದಲ್ಲಿ ನೀರು ನಿಂತಿರುತ್ತದೆ. ಆ ನದಿಯ ಆಗ್ನೇಯ ಪ್ರದೇಶದಲ್ಲಿ ಕಾಮೇರೂನ ಎಂಬ ಪರ್ವತದ ವರೆಗೆ ಗುಡ್ಡಗಳು ತುಂಬಿರುತ್ತವೆ. ಉಳಿದದ್ದೆಲ್ಲ ಸಮುದ್ರ ತೀರವು ಬೆಳೆಯುಳ್ಳದುಂಟು.

ಸಮುದ್ರ ದಂಡೆಗುಂಟ ಇಂಗ್ಲಿಷರೂ, ಫ್ರೆಂಚರೂ, ಜರ್ಮನ್ನರೂ ಸಂರಕ್ಷಿತ ರಾಜ್ಯಗಳನ್ನೂ, ವ್ಯಾಪಾರ ಠಾಣ್ಯಗಳನ್ನೂ ಸ್ಥಾಪಿಸಿ

ದ್ದಾರೆ. ಅವುಗಳಲ್ಲಿ ಮುಖ್ಯವಾದವುಗಳು:— ಸಿರಾಲಿಓನ ಲೈಬೀರಿಯ, ಫ್ರೆಂಚರ ಆನೆಹಲ್ಲಿನ ದಂಡೆ ವಸಹಾತು, ಇಂಗ್ಲಿಷರ ಬಂಗಾರದ ದಂಡೆ ವಸಹಾತು, ಜರ್ಮನ್ ತೊಗೋಲಾಂದ, ದಾಹೋಮೀ, ಲಾಗೋಸ, ದಕ್ಷಿಣ ಹಾಗು ಉತ್ತರ ನೈಜೆರಿಯ, ಮತ್ತು ಜರ್ಮನ್ ಕಾಮೆರೂನ.

ಸಿರಾಲಿಓನ ಎಂಬ ವಸಹಾತನ್ನು ಗುಲಾಮರ ವ್ಯಾಪಾರ ಮುರಿಯುವದಕ್ಕಾಗಿ ಇಂಗ್ಲಿಷರು ೧೭೮೭ ರಲ್ಲಿ ಸ್ಥಾಪಿಸಿದರು. ಇದರ ರಾಜಧಾನಿ **ಫ್ರೀಟೌನವು.** ಆದರ ಆಗ್ನೇಯಕ್ಕೆ ಲೈಬೀರಿಯ ಎಂಬ ದೊಂದು ಸ್ವತಂತ್ರವಾದ ಸಿದ್ದೀಜನರ ಪ್ರಜಾಸತ್ತಾತ್ಮಕ ರಾಜ್ಯವಿರುತ್ತದೆ. ಇದನ್ನು ಗುಲಾಮರಿಗೆ ಸ್ವಾತಂತ್ರ್ಯಕೊಡುವದಕ್ಕಾಗಿ ಹೊರಟಂಥ ಒಂದು ಅಮೇರಿಕದ ಸಂಘದವರು **೧೮೨೨** ರಲ್ಲಿ ಸ್ಥಾಪಿಸಿದರು; ಇದರ ರಾಜಧಾನಿ **ಮನರೋವಿಯಾ** ಫ್ರೆಂಚರ ಆನೆಹಲ್ಲಿನ ದಂಡೆಯ ವಸಹಾತು ಲೈಬೀರಿಯದ ಪೂರ್ವಕ್ಕೆ ಇರುತ್ತದೆ. ಅದರ ಪೂರ್ವಕ್ಕೆ ಇಂಗ್ಲಿಷರ ಬಂಗಾರ ದಂಡೆಯ ವಸಹಾತು ಇರುತ್ತದೆ. ಅದರಲ್ಲಿ **ಕೇಪಕೋಸ್ತಕ್ಯಾಸಲ್ ಎಲ್‌ಮಿನಾ** ಎಂಬವುಗಳುಂಟು. **ಲಾಗೋಸ** ಎಂಬ ಬ್ರಿಟಿಶ್ ವಸಹಾತು ಬಾಯಿತ್ ಆಫ ಬೆನಿನ್ ಆಖಾತದ ದಂಡೆಯಲ್ಲಿರುತ್ತದೆ; ಅದು ಈಗ ದಕ್ಷಿಣ ನೈಜೆರಿಯದ ಭಾಗವಾಗಿದೆ. ಈಗ ಇಂಗ್ಲೀಷರ ವಶದಲ್ಲಿರುವ ಅಶಾಂತೀ ಸಂಸ್ಥಾನವು ಬಂಗಾರ ದಂಡೆಯ ಉತ್ತರಕ್ಕಿರುತ್ತದೆ; ಆದರ ಮುಖ್ಯ ಪಟ್ಟಣವು **ಕುಮಾಸೀ.** ದಾಹೋಮೀ ಎಂಬ ಸಿದ್ದೀ ಸಂಸ್ಥಾನವು ತೊಗೊಲಾಂದದ ಪೂರ್ವಕ್ಕಿರುತ್ತದೆ. ಅದನ್ನು ಒಳಗಡೆಯಲ್ಲಿ ಫ್ರೆಂಚರು ತಮ್ಮ ರಾಜ್ಯಕ್ಕೆ ಜೋಡಿಸಿದ್ದಾರೆ; .ಅದರ ರಾಜಧಾನಿಯು ಅಬೊಮಿ. ನೈಜೆರಿಯವು (ದಕ್ಷಿಣ, ಉತ್ತರ ಸಹಿತ) ದಂಡೆಯಿಂದ ಚಾದ ಸರೋವರದವರೆಗೆ ವಿಸ್ತಾರವಾಗಿರುತ್ತದೆ. ಇದರಲ್ಲಿ ನೈಜರ, ಬೆನ್ಯೂ ನದಿಗಳ ಸಂಗಮದ ಹತ್ತರ ಇರುವ **ಲೋಕಜಾ** ಎಂಬದು ಸೈನ್ಯದ ಮುಖ್ಯ ಠಾಣ್ಯವಾಗಿದೆ. ಬಂಗಾರ ದಂಡೆಯ ಪೂರ್ವಕ್ಕಿರುವ ತೊಗೊಲಾಂದ ಎಂಬ ಸಣ್ಣ ಪ್ರಾಂತವೂ

ಕಾಮೆರೂನವೂ ಜರ್ಮನ್ನರ ವಸಹಾತುಗಳಾಗಿವೆ. ಕಾಮೆರೂನದಲಿ ಕಾಮೆರೂನ ಪರ್ವತಗಳು ಬರುತ್ತವೆ. ಚಾದ ಸರೋವರವು ಇದರ ಈಶಾನ್ಯ ಮೇರೆಯಾಗಿದೆ.

## ೪ ಕೆಳಗಿನ ಗಿನಿ ದೇಶವು.

ಈ ದೇಶದಲ್ಲಿ ಫ್ರೆಂಚಕಾಂಗೊ, ಸ್ವತಂತ್ರಕಾಂಗೊ ಸಂಸ್ಥಾನ, ಪೋರ್ತುಗೀಜರ ಅಂಗೋಲಾ, ಮತ್ತು ಜರ್ಮನ್ ನೈಋತ್ಯ ಆಫ್ರಿಕ ಇಷ್ಟೆಲ್ಲ ಬರುತ್ತವೆ.

**ಹೊಳೆಗಳು:—** ಕಾಂಗೊ ಉರ್ಫ ಜೇರ ಎಂಬ ಹೊಳೆಯು ಮುಖ್ಯವುಂಟು.

ಫ್ರೆಂಚಕಾಂಗೋವು ಜರ್ಮನ್ ಕಾಮೆರೂನಕ್ಕೂ ಸ್ವತಂತ್ರ ಕಾಂಗೊಕ್ಕೂ ನಡುವೆ ಇರುತ್ತದೆ; ಇದರಲ್ಲಿ **ಬ್ರಾಜಾವಿಲ್** ಎಂಬದು ಮುಖ್ಯ ಠಾಣ್ಯವಾಗಿದೆ. ಸ್ವತಂತ್ರ ಕಾಂಗೊ ಸಂಸ್ಥಾನವು ಈಗ ಬೆಲ್‌ಜ್ಯಮದ ರಾಜ್ಯಕ್ಕೆ ಸೇರಿದೆ. ಕಾಂಗೊನದಿಯ ದಂಡೆಯ ಪ್ರದೇಶವೆಲ್ಲ ಇದರಲ್ಲಿ ಬರುತ್ತದೆ. ಇದು ಪೂರ್ವಕ್ಕೆ ಟಾಂಗಾನಿಕಾ ಸರೋವರದ ವರೆಗೆ ವಿಸ್ತಾರವಾಗಿದೆ. ಕಾಂಗೊನದಿಯ ಧಡದಲ್ಲಿರುವ **ಬೊಮಾ** ಮತ್ತು **ಮಟಾದಿ** ಎಂಬವು ಇದರಲ್ಲಿ ಮುಖ್ಯ ಠಾಣ್ಯಗಳಾಗಿವೆ. ಇದರ ದಕ್ಷಿಣಕ್ಕೆ ಪೋರ್ತುಗೀಜರ ಅಂಗೋಲಾ ಸಂಸ್ಥಾನವಿರುತ್ತದೆ. ಅದರಲ್ಲಿ **ಸೆಂತಪಾಲ ದಿ ಲೋಅಂದಾ** ಎಂಬ ಮುಖ್ಯ ಠಾಣ್ಯವು ಸಮುದ್ರದಂಡೆಯಲ್ಲಿರುತ್ತದೆ. ಅದರ ದಕ್ಷಿಣಕ್ಕೆ **ಬೆಂಗ್ವೆಲಾ** ಎಂಬ ಬಂದರವಿರುತ್ತದೆ. ಜರ್ಮನ್ ನೈಋತ್ಯ ಆಫ್ರಿಕವು ಅಂಗೋಲಾಕ್ಕೂ ಕೇಪಕಾಲನಿಗೂ ನಡುವೆ ಇರುತ್ತದೆ. ಇದರಲ್ಲಿ ದಾಮರಾಲಾಂದ, ಗ್ರೇತನಾಮಕ್ವಾಲಾಂದಗಳು ಬರುತ್ತವೆ. ಈ ದೇಶವೆಲ್ಲ ಬಹುತರವಾಗಿ ಹಾಳು ಇರುತ್ತದೆ. **ವಾಲಫಿಶ್‌ಬೇ** ಎಂಬ ಬಂದರವು ಇಂಗ್ಲಿಷರ ಆಧೀನದಲ್ಲಿದೆ.

## ೫ ಬ್ರಿಟಿಶ್ ದಕ್ಷಿಣ ಆಫ್ರಿಕ.

ಇದರಲ್ಲಿ ಆರು ಸಣ್ಣ ಸಣ್ಣ ದೇಶಗಳಿರುತ್ತವೆ. ಅವುಗಳ ವಿವರ:-

| ದೇಶಗಳು. | ರಾಜಧಾನಿಗಳು. |
|---|---|
| ೧. ಕೇಪಕಾಲನಿ ... ... | ಕೇಪಟೌನ. |
| ೨. ನಾತಾಲ ... ... | ಪೀತರ್ಮಾರಿತ್ಸಬರ್ಗ. |
| ೩. ಆರೇಂಜ ರಿವ್ಹರ ಕಾಲನಿ§ ... | ಬ್ಲೂಮಫೊಂತೀನ್. |
| ೪. ತ್ರಾನ್ಸವಾಲ§ ... ... | ಪ್ರೀತೋರಿಯಾ. |
| ೫. ಬಾಸುತೊಲಾಂದ (ಬಾಸುತೊ ಜನರ ದೇಶ) | |
| ೬. ಬುಚಾನಾಲಾಂದ (ಬುಚಾನಾ ,, ,, ) | |
| ೭. ರೋದೆಸಿಯಾ | |
| ೮. ಬ್ರಿಟಿಶ್ ಮಧ್ಯ ಆಫ್ರಿಕ ... | ಝೋಂಬಾ |

ಕೇಪಕಾಲನಿ, ನಾತಾಲ ಇವೆರಡು ದೇಶಗಳು ಇಂಗ್ಲಿಷ ಜನರಿಂದ ಒಕ್ಕಲಾಗಿದ್ದು ಇವುಗಳಿಗೆ ಪಾರ್ಲಿಮೆಂತುಗಳುಂಟು. ಇಂಗ್ಲಂಡದಿಂದ ನೇಮಿಸಲ್ಪಟ್ಟ ಹಾಯಕಮಿಶನರರು ಇವುಗಳಿಗೆ ಮೇಲಧಿಕಾರಿಗಳಾಗಿರುತ್ತಾರೆ. ಆರೇಂಜ ರಿವ್ಹರ ಕಾಲನಿ, ತ್ರಾನ್ಸವಾಲ ಸಂಸ್ಥಾನಗಳನ್ನು ದಚ್ ಜನರು ಸ್ಥಾಪಿಸಿದರು. ಅವರ ವಂಶದವರಿಂದ ಇಂಗ್ಲಿಷರು ಈ ಸಂಸ್ಥಾನಗಳನ್ನು ಜಯಿಸಿಕೊಂಡರು. ಬಾಸುತೊಲಾಂದವು ನಾತಾಲಕ್ಕೂ ಆರೇಂಜ ರಿವ್ಹರ ಕಾಲನಿಗೂ ನಡುವೆ ಒಂದು ಸಣ್ಣ ಪ್ರಾಂತವಿದೆ. ಅದು ಒಬ್ಬ ರೆಸಿಡೆಂಟ ಕಮಿಶನರರ ಕೈಕೆಳಗಿದೆ. ಬುಚಾನಾಲಾಂದವು ಕೇಪಕಾಲನಿಯ ಉತ್ತರಕ್ಕೆ ಉಂಟು. ಇದರಲ್ಲಿ ಹಲವು ದೇಶೀಯ ಸಂಸ್ಥಾನಗಳಿದ್ದು ಪ್ರತಿ ಒಬ್ಬ ಸಂಸ್ಥಾನಿಕನು ಒಬ್ಬ ರೆಸಿಡೆಂಟ ಬ್ರಿಟಿಶ್ ಕಮಿಶನರರ ಕೈಕೆಳಗೆ ಇರುತ್ತಾನೆ. ರೊಡೆಸಿಯಾವು ಬುಚಾನಾಲಾಂದ, ತ್ರಾನ್ಸವಾಲಗಳ ಉತ್ತರಕ್ಕೆ ಉಂಟು. ಇದರಲ್ಲಿ ಉತ್ತರ ರೊದೆಸಿಯಾ, ದಕ್ಷಿಣ ರೊದೆಸಿಯಾ ಎಂದು ಎರಡು ಭಾಗಗಳುಂಟು. ಬ್ರಿಟಿಶ್ ಮಧ್ಯ ಆಫ್ರಿ

§ ಈ ದೇಶಗಳು ಮೊದಲು ಪ್ರಜಾಸತ್ತಾತ್ಮಕವಿದ್ದವು. ಆದರೆ ಸ್ವಲ್ಪ ದಿವಸಗಳ ಪೂರ್ವದಲ್ಲಿ ಇಂಗ್ಲಿಷರು ಇವನ್ನು ತಕ್ಕೊಂಡರು.

ಕವು ರೋದೆಸಿಯಾದ ಈಶಾನ್ಯಕ್ಕೆ ಉಂಟು. ಕೇಪಕಾಲನಿಯಲ್ಲಿ ರಾಜಧಾನಿಯು ಹೊರ್ತು ಗ್ರೆಹಾಮ್ಸತೌನ, ಪೋರ್ತ ಇಲಿಜಾಬೆಥ ಎಂಬ ಪಟ್ಟಣಗಳುಂಟು. ನಾತಾಲ ದೇಶದಲ್ಲಿ ದರ್ಬಾನ (ಪೋರ್ತ ನಾತಾಲ) ಎಂಬ ಪಟ್ಟಣವದೆ. ತ್ರಾನ್ಸವಾಲದಲಿ ಜೋಹಾನಸಬರ್ಗ ಎಂಬದು ಬಂಗಾರದ ಕಣಿಗಳ ಉದ್ಯೋಗದ ಮೂಲಕ ರಾಜಧಾನಿಗೆ ಸರಿಯಾದ ಮಹತ್ವವುಳ್ಳದ್ದಾಗಿದೆ. ದಕ್ಷಿಣ ರೋದೆಸಿಯಾದಲ್ಲಿ ಸಾಲ್ಜಬರಿ, ಬಲಾವೆಯೊ, ಅಮತಾಲಿ ಎಂಬವು ಮುಖ್ಯ ಸ್ಥಳಗಳಾಗಿವೆ.

ದಕ್ಷಿಣ ಆಫ್ರಿಕದ ನಿವಾಸಿಗಳಲ್ಲಿ ಕಾಫರ, ಜುಲೂ ಮುಂತಾದವರು ದಂಡಾಳುತನವುಳ್ಳವರಾಗಿದ್ದಾರೆ. ಬಾಸುತೊ, ಬೆಚುಆನಾ ಜನರು ಉಳಿದವರಲ್ಲಿ ಮಹತ್ವವುಳ್ಳವರಾಗಿದ್ದಾರೆ. ಪಶ್ಚಿಮದಲ್ಲಿ ಹಾತೆಂತಾತರು ಅಜ್ಞಾನ, ಆಲಸ್ಯ, ಹೇಸಿತನದಲ್ಲಿ ಹೆಸರಾಗಿದಾರೆ

**ಭೂಶಿರಗಳು:**—ಕೇಪ ಆಫ್ ಗುಡ್ ಹೋಪ್, ಕೇಪ ಅಘಲಾಸ ಎಂಬ ಭೂಶಿರಗಳು ಪ್ರಸಿದ್ಧವುಂಟು. ಕೇಪ ಆಫ್ ಗುಡ್ ಹೋಪ್ ಭೂಶಿರವನ್ನು ಬಾರ್ಥಾಲೋಮ್ಯೂದಿಯಾಸ ಎಂಬವನು ಸನ್ ೧೪೮೬ ನೆಯ ವರ್ಷ ಕೊಂಡುಕೊಂಡನು.

**ಉಪಸಾಗರಗಳು:**—ತೇಬಲ್‌ಬೇ, ಧಾಲ್ಸಬೇ, ಆಲ್‌ಗೋಆಬೇ, ದೆಲಾಗೋಆಬೇ ಎಂಬ ಉಪಸಾಗರಗಳು ಮುಖ್ಯವುಂಟು.

**ವ್ಯಾಪಾರದ ಜಿನಸುಗಳು:**—ಉಣ್ಣಿ, ಬುಂದು, ಶಹಾಮೃಗದ ಗರಿ, ಚರ್ಮ, ಮದ್ಯ ಮುಂತಾದ ಪದಾರ್ಥಗಳು ಪರಸ್ಥಳಕ್ಕೆ ಹೋಗುತ್ತವೆ. ನಾತಾಲ ದೇಶದಲ್ಲಿ ಸಕ್ಕರೆ, ಆನೆಹಲ್ಲುಗಳು ಮುಖ್ಯಸರಕುಗಳುಂಟು. ನಾತಾಲ, ಅರೇಂಜ ರಿವ್ಹರ ಕಾಲನಿ ತ್ರಾನ್ಸವಾಲ ಈ ಮೂರು ದೇಶಗಳಲ್ಲಿ ಚಿನ್ನ-ವಜ್ರಗಳ ಕಣಿಗಳ, ಒಳಗಡೆಯಲ್ಲಿ ಗೊತ್ತು ಹಚ್ಚಲ್ಪಟ್ಟವೆ.

## ೬. ಪೂರ್ವ ಆಫ್ರಿಕ.

ಈ ಭಾಗದ ದಕ್ಷಿಣದಲ್ಲಿ ತ್ರಾನ್ಸವಾಲ, ಜೂಲೂಲಾಂದ ಎಂಬ ದೇಶಗಳೂ ಉತ್ತರದಲ್ಲಿ ಆದನದ ಆಖಾತವೂ ಉಂಟು. ಜಾಂಜೀ

ಬಾರ ಹೊರತಾಗಿ ಈ ಭಾಗದ ಉಳಿದ ಪ್ರದೇಶವೆಲ್ಲ, ಬಹುತರ ವಾಗಿ ಯುರೋಪೀಯ ರಾಷ್ಟ್ರಗಳಿಗೆ ಅಂಕಿತವಾಗಿದೆ. ಇದರಲ್ಲಿ ೫ ದೇಶಗಳಿವೆ. ಅವುಗಳ ವಿವರ:—

| | ದೇಶಗಳು. | | ರಾಜಧಾನಿಗಳು |
|---|---|---|---|
| ೧ | ಸೋಫಾಲಾ | ... | ಸೋಫಾಲಾ |
| ೨ | ಮೋಜಾಂಬಿಕ | ... | ಮೋಜಾಂಬಿಕ |
| ೩ | ಜಾಂಜೀಬಾರ | ... | ಜಾಂಜೀಬಾರ |
| ೪ | ಸೋಮಾಲೀ ಜನರ ದೇಶ | | ,, |
| ೫ | ಗಾಲಾ ಜನರ ದೇಶ | ... | ,, |

ಸೋಫಾಲಾ, ಮೋಜಾಂಬಿಕ, ಇವೆರಡು ದೇಶಗಳು ಪೊರ್ತುಗೀಜ ಜನರ ವಶದಲ್ಲಿರುತ್ತವೆ. ಜಾಂಜೀಬಾರದಲ್ಲಿ ಒಬ್ಬ ಮುಸಲ್ಮಾನ ಅರಸನು ಆಳುತ್ತಾನೆ.ಅವನಿಗೆ ಸುಲ್ತಾನನೆನ್ನುವರು.ಉಳಿದ ಎರಡು ದೇಶಗಳು ತೀರ ಕಾಡು ಸ್ಥಿತಿಯಲ್ಲಿರುತ್ತವೆ.

ರಾಜಧಾನಿಗಳಲ್ಲದೆ,ಜಾಂಜೀಬಾರದಲ್ಲಿ ಮೊವ್ ಬಾಸ ಎಂಬ ಪಟ್ಟಣವೂ, ಆದನದ ಆಖಾತದ ದಂಡೆಯಲ್ಲಿ ಸೋಮಾಲೀ ಜನರ ಬರಬೆರಾ ಎಂಬ ಬಂದರವೂ, ಗಾಲಾ ಜನರ ಜೀಲಾ ಎಂಬ ಬಂದರವೂ ಪ್ರಸಿದ್ಧವುಂಟು.

**ಪರ್ವತಗಳು**:—ಗ್ವಾರ್ದಫೂಯಿ ಭೂಶಿರದಿಂದ ಕೇಪ ಆಫ್ ಗುಡ್ ಹೋಪದವರೆಗೆ ಪೂರ್ವಸಮುದ್ರದಂಡೆಗೆ ಸಮಾಂತರವಾಗಿ ಒಂದು ದೊಡ್ಡ ಪರ್ವತಾವಳಿ ಇರುತ್ತದೆ. ಅದರಲ್ಲಿ ಜಾಂಜೀಬಾರಕ್ಕೂ ದೊಡ್ಡ ಸರೋವರಗಳ ಪ್ರದೇಶಕ್ಕೂ ನಡುವೆ ಕಿಲೀಮಾನ್ ಜಾರೋ ಎಂಬದೊಂದು ಉನ್ನತವಾದ ಶಿಖರವುಂಟು.

**ಹೊಳೆಗಳು**:—ಜಾಂಬಿಜೀ ಎಂಬ ಮುಖ್ಯ ಹೊಳೆಯು ಮೋಜಾಂಬಿಕದ ಆಖಾತಕ್ಕೆ ಕೂಡುತ್ತದೆ.

**ಸಾಮುದ್ರಧುನಿಗಳು**:—ಮೋಜಾಂಬಿಕದ ಕೊಲ್ಲಿಯು ಮೋಜಾಂಬಿಕ ದೇಶಕ್ಕೂ ಮಾದಾಗಾಸ್ಕರವೆಂಬ ದ್ವೀಪಕ್ಕೂ ನಡುವೆ ಇರುತ್ತದೆ.

**ಭೂಶಿರಗಳು**:—ಕೇಪ ಗ್ವಾರ್ಡಫೂಯಿ ಆಫ್ರಿಕದ ಪೂರ್ವ ಬಿಂದುವುಂಟು.

**ದ್ವೀಪಗಳು**:—ಪೂರ್ವ ದಂಡೆಯ ಹತ್ತಿರ ಎಷ್ಟೋದ್ವೀಪಗಳುಂಟು. ಅವುಗಳ ವಿವರ:—

ಜಾಂಜೀಬಾರ (ಮುಖ್ಯಪಟ್ಟಣ ಜಾಂಜೀಬಾರ), ಮಾದಾಗಾಸ್ಕರ (ರಾಜಧಾನಿ **ತಾನಾನಾರಿವೊ**), ಕೊಮೊರೂ ಎಂಬ ದ್ವೀಪಗಳು ಈಗ ಫ್ರೆಂಚರ ವಶದಲ್ಲಿ ಇರುತ್ತವೆ. **ಮಾರೀಶಸ್** (ರಾಜಧಾನಿ **ಪೋರ್ತಲುಯಿ**), ಸೆಚಲ ಇವೆರಡು ಇಂಗ್ಲಿಷರ ವಶದಲ್ಲಿ ಇರುತ್ತವೆ. ಬುರ್ಬೋ ಎಂಬ ದ್ವೀಪವು ಫ್ರೆಂಚರ ವಶದಲ್ಲಿಇರುತ್ತದೆ. ಪೂರ್ವಕ್ಕೆ ಸೊಕೊತ್ರಾ ಎಂಬ ದ್ವೀಪವು ಇಂಗ್ಲಿಷರ ವಶದಲ್ಲಿ ಇರುತ್ತದೆ.

**ವ್ಯಾಪಾರದ ಜೀನಸುಗಳು**:—ಬಂಗಾರ, ಆನೆಹಲ್ಲು ಇವೆರಡು ಮುಖ್ಯ ಸರಕುಗಳುಂಟು. ಪೂರ್ವ ದಂಡೆಯಲ್ಲಿಗುಲಾಮರ ವ್ಯಾಪಾರವು ಬಹಳ ನಡೆಯುತ್ತದೆ. ಆದರೆ ಜಾಂಜೀಬಾರದ ಸುಲ್ತಾನನು ಆ ವ್ಯಾಪಾರವನ್ನು ಮುರಿಯುವ ಬಗ್ಗೆ ಇಂಗ್ಲಂಡದ ಸರಕಾರಕ್ಕೆ ಅಭಿವಚನ ಕೊಟ್ಟಿದ್ದಾನೆ. ಮಾರೀಶಸ್ ದ್ವೀಪದಲ್ಲಿ ಮೇಲಾದ ಸಕ್ಕರೆಯು ಹುಟ್ಟುತ್ತದೆ.

ಪೂರ್ವ ದಂಡೆಯಲ್ಲಿ ಅರಬ ವರ್ತಕರ ಸಮಾಜವು ಬಹು ದೊಡ್ಡದಿರುತ್ತದೆ. ದಕ್ಷಿಣಭಾಗದ ನಿವಾಸಿಗಳು ಕಾಫರ ಜನರಂಥವರಿರುತ್ತಾರೆ; ಉತ್ತರ ಭಾಗದಲ್ಲಿ ಅಬಿಸೀನಿಯಾದ ಜನರಂಥ ನಿವಾಸಿಗಳು ವಾಸಿಸುತ್ತಾರೆ. ಇವರು ಪಶ್ಚಿಮ-ಮಧ್ಯಭಾಗಗಳಲ್ಲಿ ವಾಸಿಸುವ ಸಿದ್ಧೀ ಜನರಿಗಿಂತ ಹೆಚ್ಚಿಗೆ ಸುಧಾರಿಸಿದವರಿರುತ್ತಾರೆ.

## ೭. ನೆರೆಯ ದ್ವೀಪಗಳು.

ಪೂರ್ವ ದಂಡೆಯ ಹತ್ತಿರ ಇರುವ ದ್ವೀಪಗಳನ್ನು ಹಿಂದೆ ವಿವರಿಸಿರುತ್ತೇವೆ (ಪೂರ್ವ ಆಫ್ರಿಕ ನೋಡು). **ಪಶ್ಚಿಮ** ದಂಡೆಯ ಹತ್ತಿರ ಅಜೋರ್ಸ್, ಮದೀರಾ, ಕಾನರೀ, ಕೇಪವರ್ದ ಎಂಬ ದ್ವೀಪಗಳಿರುತ್ತವೆ.( ಸ್ಪೇನ ಪೊರ್ತುಗಾಲಗಳ ವರ್ಣನೆಯನ್ನು

ನೋಡು ). ಅದೇ ದಂಡೆಯ ಹತ್ತರ ಗಿನಿಯ ಆಖಾತದಲ್ಲಿ ಫರ್ನಾಂ ದೊಪೋ, ಆನಾಬೋನಾ ಎಂಬ ದ್ವೀಪಗಳು ಸ್ಪೇನದ ವಶದಲ್ಲಿ ಇರುತ್ತವೆ; ಪ್ರಿನ್ಸಿಸ ಐಲಂದ, ಸಾಂತೋಮೆ ಎಂಬ ದ್ವೀಪಗಳು ಪೋರ್ತುಗಾಲದ ವಶದಲ್ಲಿರುತ್ತವೆ. ದಕ್ಷಿಣ ಅತ್‌ಲಾತಿಂಕ ಮಹಾ ಸಾಗರದಲ್ಲಿ ಆಸೆಶನ್, ಸೆಂತ ಹೆಲಿನಾ ಎಂಬ ದ್ವೀಪಗಳು ಇಂಗ್ಲಿಷರ ಅಧಿಕಾರಕ್ಕೆ ಸೇರಿರುತ್ತವೆ.

---

### ೫ ನೆಯ ಭಾಗ.

## ಅಮೇರಿಕ ಖಂಡವು

ಈ ಖಂಡದ ಉತ್ತರಕ್ಕೆ ಉತ್ತರ ಮಹಾಸಾಗರವೂ, ಪಶ್ಚಿಮಕ್ಕೆ ಪಾಸಿಫಿಕ ಮಹಾಸಾಗರವೂ, ದಕ್ಷಿಣಕ್ಕೆ ದಕ್ಷಿಣ ಮಹಾಸಾಗರವೂ, ಪೂರ್ವಕ್ಕೆ ಅತ್ಲಾಂತಿಕ ಮಹಾಸಾಗರವೂ ಉಂಟು. ಅಮೇರಿಕದ ವಾಯುವ್ಯ ಮೂಲೆಗೂ ಏಶಿಯದ ಈಶಾನ್ಯ ಮೂಲೆಗೂ ನಡುವೆ ಬೆಹರಿಂಗದ ಸಾಮುದ್ರಧುನಿಯುಂಟು.

ಅಮೇರಿಕದಲ್ಲಿ ಎರಡು ದೊಡ್ಡ ಭಾಗಗಳಿವೆ. ಉತ್ತರಭಾಗಕ್ಕೆ ಉತ್ತರ ಅಮೇರಿಕ ಎಂತಲೂ ದಕ್ಷಿಣಭಾಗಕ್ಕೆ ದಕ್ಷಿಣ ಅಮೇರಿಕ ಎಂತಲೂ ಹೆಸರುಗಳುಂಟು. ಪಾನಾಮಾ ಸಂಯೋಗ ಭೂಮಿಯು ಒಂದು ಭಾಗವನ್ನು ಎರಡನೆಯ ಭಾಗಕ್ಕೆ ಜೋಡಿಸುತ್ತದೆ.

### ೧ ಉತ್ತರ ಅಮೇರಿಕ

**ಮೇರೆಗಳು**:—ಉತ್ತರಕ್ಕೆ ಉತ್ತರ ಮಹಾಸಾಗರವು, ಪಶ್ಚಿಮಕ್ಕೆ ಬೆಹರಿಂಗದ ಸಾಮುದ್ರಧುನಿ, ಪಾಸಿಫಿಕ ಮಹಾಸಾಗರ; ದಕ್ಷಿಣಕ್ಕೆ ಪಾನಾಮಾ ಎಂಬ ಸಂಯೋಗಭೂಮಿ, ಪಾಸಿಫಿಕ್ ಮಹಾಸಾಗರ; ಪೂರ್ವಕ್ಕೆ ಕಾರಿಬಿಯನ್ ಸಮುದ್ರ, ಮೆಕ್ಸಿಕೋದ ಉಪಸಾಗರ, ಅತ್ಲಾಂತಿಕ ಮಹಾಸಾಗರ; ಈ ಪ್ರಕಾರ ಮೇರೆಗಳುಂಟು.

ಉತ್ತರ ಅಮೇರಿಕದಲ್ಲಿ ನಾಲ್ಕು ದೇಶಗಳಿವೆ. ಅವುಗಳ ಹೆಸರುಗಳು—

೧. ಕಾನಡಾ ದೇಶದ ರಾಜ್ಯ.

೨. ಯುನೈತೆದ ಸ್ಟೇತ್ಸ (ಸಂಯುಕ್ತ-ಸಂಸ್ಥಾನಗಳ ರಾಜ್ಯ)

೩. ಮೆಕ್ಸಿಕೋ.

೪. ಸೆಂಟ್ರಲ್ (ಮಧ್ಯ) ಅಮೇರಿಕ

ಈ ದೇಶಗಳಲ್ಲದೆ ಉತ್ತರ ಅಮೇರಿಕದ ದಂಡೆಯ ಹತ್ತರ ದೊಡ್ಡ ದೊಡ್ಡ ದ್ವೀಪಗಳಿರುತ್ತವೆ. ಅವು ಮುಂದೆ ಹೇಳಲ್ಪಟ್ಟವೆ.

ಉತ್ತರ ಅಮೇರಿಕದ ದಕ್ಷಿಣಕ್ಕೆ ಮೆಕ್ಸಿಕೋದಿಂದ ಪಾನಾಮಾ ಸಂಯೋಗಭೂಮಿಯುವರೆಗೆ ವಿಸ್ತೃತವಾದಂಥಾ ಪಟ್ಟಿಗೆ ಸೆಂಟ್ರಲ್ (ಮಧ್ಯ) ಅಮೇರಿಕ ಅನ್ನುತ್ತಾರೆ. ಅದರಲ್ಲಿ ಆರು ಸಣ್ಣ ಸ್ವತಂತ್ರ ಸಂಸ್ಥಾನಗಳುಂಟು.

**ಸಮುದ್ರಗಳು:**— ಕಾರಿಬಿಯನ್ ಸಮುದ್ರವು ಉತ್ತರ-ದಕ್ಷಿಣ ಅಮೇರಿಕಗಳ ನಡುವೆ ಇರುತ್ತದೆ.

**ಪರ್ವತಗಳು:**— ರಾಕೀಪರ್ವತವು ಉತ್ತರ ಅಮೇರಿಕದ ಉತ್ತರದಿಂದ ದಕ್ಷಿಣ ತುದಿಯ ವರೆಗೆ ಹೋಗಿರುತ್ತದೆ.

**ಧರ್ಮವೂ ರಾಜ್ಯರೀತಿಯೂ:**— ಪೂರ್ವದಲ್ಲಿ ಉತ್ತರ ದಕ್ಷಿಣ ಅಮೇರಿಕ ಖಂಡದೊಳಗೆ ಮೂಲ ನಿವಾಸಿಗಳಾದ ಇಂಡಿಯನ್ ಜನರು ವಾಸಿಸುತ್ತಿದ್ದರು. ಆದರೆ ಈ ಖಂಡವನ್ನು ಕೋಲಂಬಸನು ಸನ್ ೧೪೯೨ ನೆಯ ವರ್ಷ ಗೊತ್ತು ಹಚ್ಚಿದಂದಿನಿಂದ ಯುರೋಪ ಖಂಡದವರು ಬಹು ಜನರು ಅಲ್ಲಿಗೆ ಹೋಗಿ ವಾಸ ಮಾಡಹತ್ತಿದರು. ಆದರಿಂದ ಮೂಲನಿವಾಸಿಗಳ ವಸ್ತಿಯು ಕಡಿಮೆಯಾಗುತ್ತಾ ಬಂತು. ಕಾನದಾ, ಯುನೈಟೆದ ಸ್ಟೇಟ್ಸ, ಇವೆರಡು ದೇಶಗಳಲ್ಲಿ ವಾಸಿಸುವ ಯುರೋಪಿಯನ್ ಜನರು ಪ್ರೊತಸ್ತಂತ ಮತದವರುಂಟು; ಅವರು ಇಂಗ್ಲಿಷ ಭಾಷೆಯನ್ನು ಆಡುತ್ತಾರೆ. ಉಳಿದ ಯಾವತ್ತು ಯುರೋಪಿಯನ್ ಜನರು ರೋಮನ್ ಕ್ಯಾಥಲಿಕ ಮತದವರಿದ್ದಾರೆ. ಅವರಲ್ಲಿ ಕೆಲವರು ಸ್ಪಾನಿಶ ಭಾಷೆಯನ್ನೂ ಕೆಲವರು ಪೋರ್ತುಗೀಜ ಭಾಷೆಯನ್ನೂ ಆಡುತ್ತಾರೆ. ಧರ್ಮದಲ್ಲಿಯೂ ಭಾಷೆಗಳಲ್ಲಿಯೂ ಹೀಗೆ ಹೆಚ್ಚು ಕಡಿಮೆ ಇರುವ ಕಾರಣವೇನಂದರೆ, ಆರಂಭದಲ್ಲಿ ಉತ್ತರಭಾಗದೊಳಗೆ ಇಂಗ್ಲಿಷರು ಹೋಗಿ ನಿಂತರು. ಮಧ್ಯಭಾಗದಲ್ಲಿಯೂ ದಕ್ಷಿಣ ಭಾಗದಲ್ಲಿಯೂ ಸ್ಪೇನ ಪೋರ್ತುಗಾಲ ದೇಶಗಳ ಜನರು ಹೋಗಿ

ವಾಸಿಸಿದರು. ಈ ಖಂಡದೊಳಗೆ ಬಹುತರ ಯಾವತ್ತು ದೇಶಗಳಲ್ಲಿ ಪ್ರಜಾಸತ್ತಾತ್ಮಕ ರಾಜ್ಯ ರೀತಿಗಳು ನಡೆಯುತ್ತವೆ.

## ೧ ಕಾನಡಾ ದೇಶದ ರಾಜ್ಯವು

ವಾಯುವ್ಯ ಮೂಲೆ ಹೊರ್ತಾಗಿ ಉತ್ತರ ಅಮೇರಿಕದ ಉತ್ತರ ಭಾಗವೆಲ್ಲ ಈ ರಾಜ್ಯದೊಳಗೆ ಬರುತ್ತದೆ. ವಾಯುವ್ಯದ ಪ್ರದೇಶವು ಮೊದಲು ರಶಿಯುದ ಅಧಿಕಾರಕ್ಕೆ ಸೇರಿತ್ತು. ಆದರೆ ಸ್ವಲ್ಪ ವರ್ಷಗಳ ಹಿಂದೆ ಅದನ್ನು ಯುನೈತೆದ್ ಸ್ತೇತ್ಸ ರಾಜ್ಯದ ಅಧಿಕಾರಿಗಳು ರಶಿಯುದವರ ಕಡೆಯಿಂದ ಕೊಂಡುಕೊಂಡರು.

ಈ ಕಾನಡಾ ದೇಶದ ರಾಜ್ಯದಲ್ಲಿ ಅಂತಾರಿಯೋ, ಕ್ವಿಬೇಕ, ನೋವಾಸ್ಕೋಶಿಯಾ, ನ್ಯೂಬ್ರನ್ಸವಿಕ್, ಮಾನಿತೋಬಾ, ಬ್ರಿತಿಶ ಕೊಲಂಬಿಯಾ, ಪ್ರಿನ್ಸಎಡ್ವರ್ಡ ಐಲಂದ, ಸಾಸ್ಕೆಚೆವಾನ, ಅಲ್ಬರ್ಟಾ ಈ ಪ್ರಕಾರ ಒಂಭತ್ತು ಭಾಗಗಳಿರುತ್ತವೆ. ಈ ರಾಜ್ಯದಲ್ಲಿ ಇಂಗ್ಲಂಡದ ಸರಕಾರದಿಂದ ನೆಮಿಸಲ್ಪಟ್ಟ ಗವರ್ನರ ಜನರಲ್ಲನು ಕಾರಭಾರ ನಡಿಸುತ್ತಾನೆ. ಆವನ ಸಹಾಯಕ್ಕೆ ಒಂದು ಪಾರ್ಲಿಮೆಂತ ಸಭೆಯುಂಟು, ಇವಲ್ಲದೆ ಕಾನಡಾದಲ್ಲಿ ಇನ್ನೂ ಎರಡು ಪ್ರಾಂತಗಳುಂಟು. ಅವುಗಳಲ್ಲಿ ರಾಜ್ಯಸಂಬಂಧದ ವ್ಯವಸ್ಥೆಯು ಇನ್ನೂ ಆಗಿರುವದಿಲ್ಲ. ಈ ದೇಶದ ರಾಜಧಾನಿ ಒತಾವಾ ಪಟ್ಟಣವು.

**ಪಟ್ಟಣಗಳು:**—ಅಂತಾರಿಯೊ ಪ್ರಾಂತದಲ್ಲಿ ಒತಾವಾ ರಾಜಧಾನಿಯು ಅದೇ ಹೆಸರಿನ ಹೊಳೆಯ ಧಡದಲ್ಲಿ ಇರುತ್ತದೆ. ಅಂತಾರಿಯೊ ಸರೋವರದ ದಂಡೆಯಲ್ಲಿ ತೊರಾಂತೋ ಪಟ್ಟಣವುಂಟು. ಕ್ವಿಬೇಕ ಪ್ರಾಂತದಲ್ಲಿ ಸೇಂತ ಲಾರೆನ್ಸ ನದಿಯ ದಂಡೆಯಲ್ಲಿ ಕ್ವಿಬೇಕ ಪಟ್ಟಣವೂ, ಆ ಹೊಳೆಗೆ ಒತಾವಾ ನದಿಯು ಸಂಗಮವಾಗುವ ಸ್ಥಳದಲ್ಲಿ ಮಾಂತ್ರಿಯಾಲ ಪಟ್ಟಣವೂ ಉಂಟು. ನ್ಯೂಬ್ರನ್ಸವಿಕ್ ಪ್ರಾಂತದಲ್ಲಿ ಸೇಂತ ಜಾನ್ ಪಟ್ಟಣವದೆ ನೋವಾಸ್ಕೋಶಿಯಾ ಪ್ರಾಂತದಲ್ಲಿ ಹಾಲಿಫಾಕ್ಸ ಎಂಬ ದೊಡ್ಡ ಬಂದರ ಉಂಟು.

**ಪರ್ವತಗಳು:**—ಈ ದೇಶದ ಪಶ್ಚಿಮಭಾಗದಲ್ಲಿ ರಾಕೀ ಪರ್ವತವದೆ. ಅದು ಉತ್ತರ ಮಹಾಸಾಗರದಿಂದ ಯುನೈತೆದ್ ಸ್ತೇತ್ಸ ದೇಶಕ್ಕೆ ಹೋಗಿರುತ್ತದೆ.

**ಹೊಳೆಗಳು:**—ಸೇಂತ ಲಾರೆನ ಹೊಳೆಯು ಅತ್‌ಲಾಂತಿಕ ಮಹಾಸಾಗರಕ್ಕೆ ಕೂಡುತ್ತದೆ; ಮಾಂಕೆಜೀ ಎಂಬ ಹೊಳೆಯು ಉತ್ತರಮಹಾಸಾಗರಕ್ಕೆ ಕೂಡುತ್ತದೆ.

**ಸರೋವರಗಳು:**—ಸುಪೀರಿಯರ, ಹ್ಯುರೋನ, ಏರೀ, ಅಂತಾರಿಯೋ ಎಂಬ ಸರೋವರಗಳು ಕಾನದಾ ದೇಶಕ್ಕೂ ಯುನೈತೆದ ಸ್ಟೇತ್ಸ ರಾಜ್ಯಕ್ಕೂ ನಡುವೆ ಮೇರೆಯಲ್ಲಿ ಇರುತ್ತವೆ. ಇವಲ್ಲದೆ ವಿನಿಪೆಗ, ಗ್ರೇತಸ್ಲೇವ, ಗ್ರೇತಬೇರ ಎಂಬ ಸರೋವರಗಳು ದೊಡ್ಡವಿರುತ್ತವೆ.

**ಆಖಾತಗಳೂ ಉಪಸಾಗರಗಳೂ:**—ಬಾಫಿನ್ನನ ಉಪಸಾಗರವು ಗ್ರೀನಲಂದದ ಪಶ್ಚಿಮಕ್ಕೆ ಉತ್ತರಸಮುದ್ರ ತೀರದಲ್ಲಿರುತ್ತದೆ. ಹದಸನ್ನನ ಉಪಸಾಗರವು ಕಾನಧಾ ದೇಶದ ಉತ್ತರದಲ್ಲಿದೆ. ಫಂದಿಯ ಉಪಸಾಗರವು ನ್ಯೂಬ್ರನ್ಸವಿಕಕ್ಕೂ ನೋವಾಸ್ಕೋಶಿಯಾ ಪ್ರಾಂತಕ್ಕೂ ನಡುವೆ ಇರುತ್ತದೆ. ಸೇಂತ ಲಾರೇನ್ಸದ ಆಖಾತವು ಕಾನದಾ ದೇಶಕ್ಕೂ ನ್ಯೂಫೌಂದಲಂದವೆಂಬ ದ್ವಿಪಕ್ಕೂ ನಡುವೆ ಇರುತ್ತದೆ.

**ಸಾಮುದ್ರಧುನಿಗಳು:**—ಬೆಲೀಐಲ ಎಂಬ ಸಾಮುದ್ರಧುನಿಯು ನ್ಯೂಫೌಂದಲಂದಕ್ಕೂ ಅಮೇರಿಕದ ಈಶಾನ್ಯ (ಲಾಬ್ರಾದೋರ) ಭಾಗಕ್ಕೂ ನಡುವೆ ಇರುತ್ತದೆ. ದೇವಿಸನ ಸಾಮುದ್ರಧುನಿಯು ಬಾಫಿನ್ನನ ಉಪಸಾಗರವನ್ನು ಅತ್‌ಲಾಂತಿಕ ಮಹಾಸಾಗರಕ್ಕೆ ಕೂಡಿಸುತ್ತದೆ. ಹದಸನ್ನ ಸಾಮುದ್ರಧುನಿಯು ಹದಸನ್ನನ ಉಪಸಾಗರವನ್ನು ಅತ್‌ಲಾಂತಿಕ ಮಹಾಸಾಗರಕ್ಕೆ ಕೂಡಿಸುತ್ತದೆ. ಬಾರೋನ ಸಾಮುದ್ರಧುನಿ, ಸ್ಮಿಥನ ಸಾಮುದ್ರಧುನಿ, ಇವೆರಡು ಬಾಫಿನ್ನನ ಉಪಸಾಗರವನ್ನು ಉತ್ತರ ಮಹಾಸಾಗರಕ್ಕೆ ಕೂಡಿಸುತ್ತವೆ.

**ಭೂಶಿರಗಳು:**—ಚದ್‌ಲೈ, ಚಾರ್ಲ್ಸ, ಸೇಬಲ್ ಈ ಮೂರು ಮುಖ್ಯ ಭೂಶಿರಗಳುಂಟು.

**ದ್ವೀಪಕಲ್ಪಗಳು:**— ನೋವಾಸ್ಕೋಶಿಯಾ ದ್ವೀಪಕಲ್ಪವು ಕಾನದಾ ದೇಶದ ಆಗ್ನೇಯಕ್ಕಿರುತ್ತದೆ.

**ದ್ವೀಪಗಳು:**—ಪ್ರಿನ್ಸ ಎಡ್ವರ್ಡ ಐಲಂದವೆಂಬ ದ್ವೀಪವು ಈ ದೇಶದ ಪೂರ್ವಕ್ಕಿರುತ್ತದೆ; ವಾನ್‌ಕವರ ಐಲಂದ ಎಂಬ ದ್ವೀಪವು ಬ್ರಿತಿಶ್ ಕೋಲಂಬಿಯದ ನೈಋತ್ಯದಲ್ಲಿರುತ್ತದೆ. ಆಂತಿಕೋಸ್ತಿ ದ್ವೀಪವು ಸೇಂತಲಾರೆನ್ಸ ನದಿಯ ಮುಖದ ಹತ್ತರ ಇರುತ್ತದೆ. ಕೇಪ ಬ್ರಿತನ್ ಐಲಂದ ಎಂಬದು ಪ್ರಿನ್ಸ ಎಡ್ವರ್ಡ ಐಲಂದ ಎಂಬ ದ್ವೀಪದ ಪೂರ್ವಕ್ಕಿರುತ್ತದೆ.

**ವ್ಯಾಪಾರದ ಜೀನಸುಗಳು:**—ಧಾನ್ಯಗಳು, ಕಟ್ಟಿಗೆ, ಮೀನ, **ಚರ್ಮ,** ಉಣ್ಣೆ ಮುಂತಾದ ಪದಾರ್ಥಗಳು ಪರಸ್ಥಳಕ್ಕೆ ಹೋಗುತ್ತವೆ. ಇವಲ್ಲದೆ ಬ್ರಿತಿಶ ಕೋಲಂಬಿಯದಲ್ಲಿ ಚಿನ್ನದ ದೊಡ್ಡದೊಡ್ಡ ಕಣಿಗಳುಂಟು.

## ೨ ಯುನೈತೆದಸ್ತೈತ್ಸ (ಸಂಯುಕ್ತ ಸಂಸ್ಥಾನದರಾಜ್ಯ)

ಈ ದೇಶದ ಪ್ರಜಾಸತ್ತಾತ್ಮಕ ರಾಜ್ಯವು ಭೂಮಿಯೊಳಗಿನ ಅತಿಪ್ರಬಲ ರಾಜ್ಯಗಳಲ್ಲಿ ಎಣಿಸಲ್ಪಡುತ್ತದೆ. ಈ ರಾಜ್ಯದಲ್ಲಿ ೪೬ ಸಂಸ್ಥಾನಗಳೂ ೪ ಪ್ರಾಂತಗಳೂ ಇರುತ್ತವೆ. ಇವಲ್ಲದೆ ಕೋಲಂಬಿಯವೆಂಬದೊಂದು ಬೇರೆ ಸಣ್ಣ ಪ್ರಾಂತವದೆ. ಅದರಲ್ಲಿಯೇ **ವಾಶಿಂಗಟನ್** ರಾಜಧಾನಿಯುಂಟು. ಈ ರಾಜ್ಯದ ಪಶ್ಚಿಮಕ್ಕೆ ಪಾಸಿಫಿಕ್ ಮಹಾಸಾಗರವದೆ. ದಕ್ಷಿಣಕ್ಕೆ ಮೆಕ್ಸಿಕೋ ದೇಶವೂ ಅದೇ ಹೆಸರಿನ ಉಪಸಾಗರವೂ ಉಂಟು. ಪೂರ್ವಕ್ಕೆ ಅತ್‌ಲಾಂತಿಕ ಮಹಾಸಾಗರವೂ, ಉತ್ತರಕ್ಕೆ ಕಾನದಾ ದೇಶವೂ ಇರುತ್ತದೆ. ಈ ಖಂಡದ ವಾಯುವ್ಯಭಾಗವು ಈಗ ಈ ಸಂಯುಕ್ತ ಸಂಸ್ಥಾನಗಳ ರಾಜ್ಯಕ್ಕೆ ಸೇರಿರುತ್ತದೆ. ಅಲ್ಲಿಮೊದಲು ರಶಿಯದವರ ಅಧಿಕಾರವಿತ್ತು.

**ಪಟ್ಟಣಗಳು:**—**ವಾಶಿಂಗ್‌ತನ್** ರಾಜಧಾನಿಯು ಪೋತೊಮಾಕ್ ಎಂಬ ಹೊಳೆಯ ಧಡದಲ್ಲಿ ಇರುತ್ತದೆ. **ಸೇಂತಲೂಯಿ** ಪಟ್ಟಣವು ಮಿಸೂರಿ ಎಂಬ ಹೊಳೆಯ ದಂಡೆಯಲ್ಲಿ ಇರುತ್ತದೆ. **ಶಿಕಾಗೊ** ಪಟ್ಟಣವು ಮಿಚಗಾನ ಸರೋವರದ ದಂಡೆಯಲ್ಲಿ ಇರುತ್ತದೆ. **ನ್ಯೂ ಆರ್ಲಿಯನ್ಸ್** ಪಟ್ಟಣವು ಮಿಸಿಸಿಪೀ ಎಂಬ ಹೊಳೆಯ ದಂಡೆಯಲ್ಲುಂಟು. **ಸಾನ್‌ಫ್ರಾನ್ಸಿಸ್ಕೋ** ಕಾಲಿಫೋರ್ನಿ

ಯಾ ಪ್ರಾಂತದಲ್ಲಿ ಇರುತ್ತದೆ. ಇವಲ್ಲದೆ **ನ್ಯೂಯಾರ್ಕ, ಬ್ರೂಕ್‌ಲಿನ, ಫಿಲಾದೆಲ್ಫಿಯಾ, ಬಾಲ್ತಿಮೋರ, ಬಾಸ್ತನ್** ಮುಂತಾದ ಪಟ್ಟಣಗಳು ಹಲವುಂಟು.

**ಪರ್ವತಗಳು:**—ಈ ದೇಶದ ಪಶ್ಚಿಮ ದಂಡೆಯ ಹತ್ತಿರ ಒಂದು ಪರ್ವತಾವಳಿಯುಂಟು. ಆದರ ಪೂರ್ವಕ್ಕೆ ರಾಕೀಪರ್ವತವದೆ; ಅದು ಕಾನದಾ ದೇಶದಿಂದ ಬಂದು, ಈ ದೇಶದೊಳಗಿಂದ ಪಾರಾಗಿ ಮೆಕ್ಸಿಕೋ ದೇಶಕ್ಕೆ ಹೋಗುತ್ತದೆ. ಪೂರ್ವಭಾಗದಲ್ಲಿ ಸೇಂತ ಲಾರೆನ್ಸ ನದಿಯಿಂದ ಮೆಕ್ಸಿಕೋದ ಉಪಸಾಗರದವರೆಗೆ ಅಲೆಘಾನೀ ಎಂಬ ಪರ್ವತವದೆ.

**ಹೊಳೆಗಳು:**—ಮಿಸಿಸಿಪೀ ಎಂಬ ದೊಡ್ಡ ಹೊಳೆಯು ಲೇಕ ಸುಪೀರಿಯರ ಎಂಬ ಸರೋವರದ ಪಶ್ಚಿಮಭಾಗದಲ್ಲಿ ಉಗಮವಾಗಿ, ದಕ್ಷಿಣಕ್ಕೆ ಹರಿದು, ಮೆಕ್ಸಿಕೋದ ಉಪಸಾಗರಕ್ಕೆ ಕೂಡುತ್ತದೆ. ರಾಕೀಪರ್ವತದಲ್ಲಿ ಉಗಮವಾಗುವ ಮಿಸೂರಿ ಎಂಬ ನದಿಯೂ ಆಲೆಘಾನೀ ಪರ್ವತದಲ್ಲಿ ಉಗಮವಾಗುವ ಓಹಿಯೊ ಎಂಬ ನದಿಯೂ ಮಿಸಿಸಿಪಿಗೆ ಕೂಡುತ್ತವೆ. ಇವಲ್ಲದೆ ಕೆಂಪು ನದಿ ಮುಂತಾದ ದೊಡ್ಡ ದೊಡ್ಡ ನದಿಗಳೆಷ್ಟೋ ಈ ಹೊಳೆಗೆ ಕೂಡುತ್ತವೆ. ರಿಯೋಗ್ರಾಂದ ದೆಲ್‌ನಾರ್ತ ಎಂಬ ಮತ್ತೊಂದು ದೊಡ್ಡಹೊಳೆಯು ರಾಕೀ ಪರ್ವತದಲ್ಲಿ ಉಗಮವಾಗಿ, ದಕ್ಷಿಣಕ್ಕೆ ಹರಿದು ಮುಂದೆ ಈ ದೇಶಕ್ಕೂ ಮೆಕ್ಸಿಕೋ ದೇಶಕ್ಕೂ ಮೇರೆಯಾಗಿರುತ್ತದೆ. ಸೇಂತ ಲಾರೆನ್ಸ ನದಿಯು ಕಾನದಾ ದೇಶದಿಂದ ಬಂದು, ಈ ದೇಶದ ಉತ್ತರಮೇರೆಯಾಗಿ ಹರಿಯುತ್ತದೆ. ಯುಕೋನ ನದಿಯು ಕಾನದಾ ದೇಶದಲ್ಲಿ ಉಗಮವಾಗಿ ವಾಯುವ್ಯಭಾಗದಲ್ಲಿ ಹರಿಯುತ್ತದೆ. ರಿಓಕೋಲೋರಾದೋ ಎಂಬ ಹೊಳೆಯು ಕಾಲಿಫೋರ್ನಿಯಾದ ಆಖಾತಕ್ಕೆ ಕೂಡುತ್ತದೆ. ಇವಲ್ಲದೆ ಹದಸನ್, ದೆಲಾವೇರ್, ಸಸ್ಕ್ವೀಹಾನಾ; ಕೊನೆತಿಕತ ಮುಂತಾದ ಹಲವು ಹೊಳೆಗಳುಂಟು. ಮಿಸಿಸಿಪಿ ಹೊಳೆಯು ೩೦೦೦ ಮೈಲು ಉದ್ದವಾಗಿ ಹರಿಯುತ್ತದೆ; ಆದರೆ ಅದರ ಶಾಖೆಯಾದ ಮಿಸೂರಿಯು ಉಗಮದಿಂದ ಮುಖದವರೆಗೆ ೪೨೦೦ ಮೈಲು ಉದ್ದವಾಗಿದೆ.

**ಸರೋವರಗಳು:**—ಮಿಚಿಗಾನ ಸರೋವರವು ಕಾನದಾ ದೇಶದ ಸರೋವರಗಳಿಗೆ ಹೊಂದಿಯದೆ. ಗ್ರೇತಸಾಲ್ತ ಸರೋವರವು ರಾಕಿಪರ್ವತದ ಪಶ್ಚಿಮಕ್ಕಿರುತ್ತದೆ.

**ಉಪಸಾಗರಗಳು:**—ದೆಲಾವೇರಬೆ, ಚೆಸಾಪೀಕಬೆ ಇವೆರಡು ಪೂರ್ವದಂಡೆಯಲ್ಲಿ ಇರುತ್ತವೆ.

**ಭೂಶಿರಗಳು:**—ಕಾದ, ಹಾತೆರಾಸ್, ಸೇಬಲ್ ಎಂಬ ಭೂಶಿರಗಳು ಪೂರ್ವದಂಡೆಯಲ್ಲಿರುತ್ತವೆ. ಫ್ಲಾತರೀ ಎಂಬ ಭೂಶಿರವು ಪಶ್ಚಿಮದಂಡೆಯಲ್ಲುಂಟು.

**ದ್ವೀಪಕಲ್ಪಗಳು:**—ಫ್ಲೋರಿದಾ ಎಂಬ ದ್ವೀಪಕಲ್ಪವು ಅತ್ಲಾಂತಿಕ ಮಹಾಸಾಗರಕ್ಕೂ ಮೆಕ್ಸಿಕೋದ ಉಪಸಾಗರಕ್ಕೂ ನಡುವೆ ಇರುತ್ತದೆ; ಅಲಿಯಾಸ್ಕಾ ಎಂಬ ದ್ವೀಪಕಲ್ಪವು ವಾಯವ್ಯ ಮೂಲೆಯಲ್ಲಿ ಇರುತ್ತದೆ.

**ದ್ವೀಪಗಳು:**—ಲಾಂಗ ಐಲಂದ ದ್ವೀಪವು ನ್ಯೂಯಾರ್ಕದ ಪೂರ್ವಕ್ಕಿರುತ್ತದೆ. ಅಲ್ಯೂಶಿಯನ್ ದ್ವೀಪಗಳು ಅಲಿಯಾಸ್ಕದ ನೈಋತ್ಯಕ್ಕಿರುತ್ತವೆ.

**ವ್ಯಾಪಾರದ ಜೀನಸುಗಳು:**—ಹತ್ತಿ, ತಂಬಾಕ, ಅಕ್ಕಿ, ಮುಂತಾದ ಧಾನ್ಯಗಳು ಪರದೇಶಕ್ಕೆ ಹೋಗುತ್ತವೆ. ವರ್ಜೆನಿಯಾ ಪ್ರಾಂತದ ತಂಬಾಕವೂ, ಜಾರ್ಜಿಯಾ, ಕಾರೋಲೈನಾ ಪ್ರಾಂತಗಳಲ್ಲಿ ಹುಟ್ಟುವ ಹತ್ತಿಯೂ, ಅಕ್ಕಿಯೂ ಬಹಳ ಪ್ರಸಿದ್ಧವುಂಟು. ಯಂತ್ರ ಮುಂತಾದ ಕೌಶಲ್ಯದ ಪದಾರ್ಥಗಳು ಪರದೇಶಗಳಿಗೆ ಬಹಳ ಹೋಗುತ್ತವೆ.

ಕಾಲಿಫೋರ್ನಿಯದಲ್ಲಿಯೂ ಅದರ ಸೆರೆಯ ಸಂಸ್ಥಾನಗಳಲ್ಲಿಯೂ ಹಲವು ಚಿನ್ನದ ಕಣಿಗಳುಂಟು. ಕಲ್ಲಿದ್ದಲಿ, ಕಬ್ಬಿಣ, ಕಲ್ಲೆಣ್ಣೆ ಮುಂತಾದವುಗಳು ಎಷ್ಟೋ ಕಡೆಯಲ್ಲಿ ಸಿಗುತ್ತವೆ.

## ೩ ಮೆಕ್ಸಿಕೋ

ಇದಾದರೂ ಪ್ರಜಾಸತ್ತಾತ್ಮಕವುಂಟು. ಈ ರಾಜ್ಯದ ಉತ್ತರಕ್ಕೆ ಸಂಯುಕ್ತಸಂಸ್ಥಾನಗಳು, ಪಶ್ಚಿಮಕ್ಕೆ ಪಾಸಿಫಿಕ್ ಮಹಾಸಾಗರವು, ದಕ್ಷಿಣಕ್ಕೆ ಸೆಂತ್ರಲ್ ಅಮೇರಿಕವೆಂಬ ಭಾಗವು, ಪೂರ್ವಕ್ಕೆ ಮೆಕ್ಸಿಕೋದ ಉಪಸಾಗರವು, ಈ ಪ್ರಕಾರ ಮೇರೆಗಳಿರುತ್ತವೆ.

**ಪಟ್ಟಣಗಳು:**—ಮೆಕ್ಸಿಕೋ ಪಟ್ಟಣವು ಮುಖ್ಯ ರಾಜಧಾನಿಯುಂಟು. ಪೂರ್ವದಂಡೆಯಲ್ಲಿ ವೆರಾಕ್ರೂಜ, ತ್ಯಾಂಪಿಕೊ ಎಂಬ ಪಟ್ಟಣಗಳೂ, ಪಶ್ಚಿಮ ದಂಡೆಯಲ್ಲಿ ಆಪಾಪೆಲಕೊ ಎಂಬ ಪಟ್ಟಣವೂ ಪ್ರಸಿದ್ಧವುಂಟು.

**ಪರ್ವತಗಳು:**—ರಾಕೀ ಪರ್ವತವು ಯುನೈತೆದ ಸ್ತೇತ್ಸ ದೇಶದಿಂದ ಬಂದು, ದಕ್ಷಿಣಕ್ಕೆ ಹೋಗಿರುತ್ತದೆ.

**ಹೊಳೆಗಳು:**—ರಿಓ ಗ್ರಾಂದ ದೆಲ್‌ನಾರ್ತ ಹೊಳೆಯು ಈ ದೇಶದ ಉತ್ತರ ಮೇರೆಯಾಗಿ ಹರಿದು, ಮೆಕ್ಸಿಕೋದ ಉಪಸಾಗರಕ್ಕೆ ಕೂಡುತ್ತದೆ.

**ಆಖಾತಗಳು:**—ಪೂರ್ವದಲ್ಲಿ ಮೆಕ್ಸಿಕೋದ ಆಖಾತವೂ, ಪಶ್ಚಿಮದಲ್ಲಿ ಕಾಲಿಫೋರ್ನಿಯದ ಆಖಾತವೂ ಉಂಟು.

**ದ್ವೀಪಕಲ್ಪಗಳು:**--ಯುಕಾತಾನ ದ್ವೀಪಕಲ್ಪವು ಮೆಕ್ಸಿಕೋ ಆಖಾತಕ್ಕೂ ಕಾರಿಬಿಯನ್ ಸಮುದ್ರಕ್ಕೂ ನಡುವೆ ಇರುತ್ತದೆ. ಕೆಳಗಿನ ಕಾಲಿಫೋರ್ನಿಯಾ ಎಂಬ ದ್ವೀಪಕಲ್ಪವು ಕಾಲಿಫೋರ್ನಿಯಾದ ಆಖಾತಕ್ಕೂ ಪಾಸಿಫಿಕ್ ಮಹಾಸಾಗರಕ್ಕೂ ನಡುವೇ ಇರುತ್ತದೆ.

**ವ್ಯಾಪಾರದ ಜೀನಸುಗಳು:**—ಬೆಳ್ಳಿ, ತಾಮ್ರ, ಕಿರಮಂಜೀಕಾಳು, ನೀಲಿ, ಚರ್ಮ, ಮಹಾಗನಿ ಮುಂತಾದ ಕಟ್ಟಿಗೆ, ಇವೇ ಮುಖ್ಯ ಸರಕುಗಳುಂಟು.

## ೪ ಮಧ್ಯ(ಸೆಂತ್ರಲ್) ಅಮೇರಿಕ

ಈ ದೇಶವು ಮೆಕ್ಸಿಕೋದ ದಕ್ಷಿಣಕ್ಕಿರುತ್ತದೆ. ಇದರಲ್ಲಿ ೫ ಪ್ರಜಾಸತ್ತಾತ್ಮಕ-ಸಂಸ್ಥಾನಗಳೂ, ೧ ಇಂಗ್ಲಿಷರ ಸಂಸ್ಥಾನವೂ ಉಂಟು. ಅವುಗಳ ಹೆಸರುಗಳು—

| ಸಂಸ್ಥಾನಗಳು. | | ರಾಜಧಾನಿಗಳು. |
|---|---|---|
| ೧. ಗ್ವಾತಿಮಾಲಾ | ... | ನ್ಯೂಗ್ವಾತಿಮಾಲಾ. |
| ೨. ಬ್ರಿತಿಶ್‌ಹಾಂದ್ಯುರಾಸ | ... | ಬೇಲಿಜ. |
| ೩. ಹಾಂದ್ಯುರಾಸ | ... | ಕೋಮಾಯಾಗ್ವೆ. |
| ೪. ಸಾನ್ ಸಾಲ್ವಾದೋರ | ... | ಸಾನ್‌ಸಾಲ್ವಾದೋರ. |
| ೫. ನಿಕಾರಾಗ್ವೆ | ... | ಮಾನಾಗ್ವೆ. |
| ೬. ಕಾಸ್ತಾರಿಕಾ | ... | ಸಾನ ಜೋಸೀ. |

**ಸರೋವರಗಳುಃ**—ನಿಕಾರಾಗ್ವೆ ಎಂಬ ಸರೋವರವು ಮುಖ್ಯವದೆ.

**ಆಖಾತಗಳುಃ**—ಹ್ಯಾಂದ್ಯುರಾಸದ ಆಖಾತವು ಪೂರ್ವದಂಡೆಯಲ್ಲಿ ಇರುತ್ತದೆ.

**ವ್ಯಾಪಾರದ ಜಿನಸುಗಳು:**— ನೀಲಿ, ಕಿರಮುಂಜೀಕಾಳು, ಬುಂದು ಇವು ಮುಖ್ಯವುಂಟು.

## ೫ ನೆರೆಯ ದ್ವೀಪಗಳು.

ಹಿಂದೆ ಹೇಳಿದ ದ್ವೀಪಗಳಲ್ಲದೆ ಉತ್ತರ ಅಮೇರಿಕದ ನೆರೆಯಲ್ಲಿ ಬಹಳ ದ್ವೀಪಗಳಿರುತ್ತವೆ. ಅವುಗಳಲ್ಲಿ ಗ್ರೀನಲಂದ, ನ್ಯೂಫೌಂದಲಂದ, ವೆಸ್ತ ಇಂದೀಜ್, ಬರ್ಮ್ಯೂದಾ ಎಂಬ ದ್ವೀಪಗಳು ಮುಖ್ಯವುಂಟು.

೧. **ಗ್ರೀನಲಂದವು:**—ಇದು ಅಮೇರಿಕದ ಈಶಾನ್ಯ ಮೂಲೆಯಲ್ಲಿ ಇರುತ್ತದೆ. ಮತ್ತು ದೆನ್ಮಾರ್ಕದವರ ಅಧಿಕಾರಕ್ಕೆ ಸೇರಿದೆ. ಈ ದ್ವೀಪವು ಅಮೇರಿಕದ ಭಾಗವೆಂದು ಮೊದಲು ಎಣಿಸಲ್ಪಡುತ್ತಿತ್ತು. ಆದರೆ ಈಗ ಬೇಹರಿಂಗದ ಸಾಮುದ್ರಧುನಿಯಿಂದ ಭಾಫಿನ್ನನ ಉಪಸಾಗರಕ್ಕೆ ಹೋಗಲಿಕ್ಕೆ ಜಲಮಾರ್ಗವು ನಿಶ್ಚಯವಾಗಿ ಇರುತ್ತದೆಂದು ಗೊತ್ತಾಗಿದೆ; ಆದರೆ ಅದು ಯಾವಾಗಲೂ ಬರ್ಫದಿಂದ ಮುಚ್ಚಿರುತ್ತದೆ.

೨. **ನ್ಯೂಫೌಂದಲಂದಃ**— ಈ ದ್ವೀಪವು ಕಾನದಾ ದೇಶದ ಪೂರ್ವಕ್ಕಿರುತ್ತದೆ. ಇದು ಇಂಗ್ಲೀಷರ ಅಧಿಕಾರಕ್ಕೆ ಸೇರಿದೆ.

ಸೆಂತಜಾನ್ಸ ಎಂಬ ಪಟ್ಟಣವು ಈ ದ್ವೀಪದ ರಾಜಧಾನಿಯುಂಟು. ಈ ದ್ವೀಪದ ದಂಡೆಯಲ್ಲಿ ಹಲವು ಭೂಶಿರಗಳುಂಟು. ಅವುಗಳಲ್ಲಿ ಕೇಪ ರೇಸ ಎಂಬುವದು ಮುಖ್ಯವದೆ. ಈ ದ್ವೀಪದ ದಂಡೆಯಲ್ಲಿ ಮೀನು ಹಿಡಿಯುವ ಕೆಲಸವು ನಡೆಯುತ್ತಿದ್ದಷ್ಟು ಭೂಮಿಯ ಮೇಲೆ ಎಲ್ಲಿಯೂ ನಡೆಯುವದಿಲ್ಲ.

೩. **ವೆಸ್ಟ್ ಇಂದೀಜ ದ್ವೀಪಗಳು:**— ಈ ದ್ವೀಪಗಳಲ್ಲಿ ನಾಲ್ಕು ಗುಂಪುಗಳಿವೆ. ಅವುಗಳ ಹೆಸರುಗಳು— ೧. ಬಹಾಮಾ ದ್ವೀಪಗಳು; ೨. ಗ್ರೇತರ್ ಅಂತಿಲೀಸ್ ಎಂಬ ದ್ವೀಪಗಳು, ೩. ಲೆಸರ್ ಅಂತಿಲೀಸ್ ಎಂಬ ದ್ವೀಪಗಳು, ೪. ಲೀವರ್ಡ (ಗಾಳಿಯ ಎದುರಿನ ) ಐಲಂದ ಎಂಬದ್ವೀಪಗಳು.

**ಬಹಾವಮಾ ದ್ವೀಪಗಳು:**— ಇವು ಸುಮಾರು ೫೦೦ ಇರುತ್ತವೆ. ಇವೆಲ್ಲ ಇಂಗ್ಲಿಷರ ವಶದಲ್ಲುಂಟು. ಇವುಗಳಲ್ಲಿ ಗ್ರೇತ ಬಹಾಮಾ, ನ್ಯೂಪ್ರಾವಿದೆನ್ಸ, ಸಾನ್ ಸಾಲ್ವಾದೋರ ಎಂಬ ದ್ವೀಪಗಳು ಮುಖ್ಯವುಂಟು. ನ್ಯೂಪ್ರಾವಿದೆನ್ಸ ದ್ವೀಪದೊಳಗಿರುವ **ನಾಸಾವೂ** ಎಂಬ ಪಟ್ಟಣವು ಈ ದ್ವೀಪಗಳ ಮುಖ್ಯಪಟ್ಟಣವದೆ.

**ಗ್ರೇತರ್ ಅಂತಿಲೀಸ್ ದ್ವೀಪಗಳು:**—ಇವುಗಳಲ್ಲಿ ಕ್ಯೂಬಾ, ಜಮೇಕಾ, ಹೈತಿ ಊರ್ಫ ಸಾನ್‌ದೋಮಿಂಗೋ, ಪ್ಯುಯೆರ್ತೋರಿಕೋ ಎಂಬವು ಮುಖ್ಯವುಂಟು ಕ್ಯೂಬಾ ಮತ್ತು ಪ್ಯುಯೆರ್ತೋರಿಕೋ ಇವೆರಡು ಮೊದಲು ಸ್ಪೇನದವರವಶದಲ್ಲಿದ್ದವು; ಆದರೆ ಈಗ ಯುನೈತೆದ ಸ್ಟೇತ್ಸದವರ ವಶದಲ್ಲಿರುತ್ತವೆ. ಅದರ ರಾಜಧಾನಿ **ಹವಾನಾ** ಪಟ್ಟಣವು. ಜಮೇಕಾ ದ್ವೀಪವು ಇಂಗ್ಲಿಷರ ವಶದಲ್ಲಿರುತ್ತದೆ; ಅದರಲ್ಲಿ **ಕಿಂಗಸ್ತನ್** ಎಂಬ ಮುಖ್ಯಪಟ್ಟಣವುಂಟು.

**ಲೆಸರ್ ಅಂತಿಲೀಸ್ ಊರ್ಫ ವಿಂದವರ್ಡಐಲಂದ ಮತ್ತು ಲೀವರ್ಡಐಲಂದ ಎಂಬ ದ್ವೀಪಗಳು:**—ಈ ಸಮುದಾಯದೊಳಗಿನ ದ್ವೀಪಗಳು ಬಹುತರ ಎಲ್ಲ ಇಂಗ್ಲಂಡ, ಸ್ಪೇನ, ಫ್ರಾನ್ಸ ಈ ದೇಶಗಳ ಅಧಿಕಾರಕ್ಕೆ ಸೇರಿರುತ್ತವೆ. ಇಂಗ್ಲಿಷರ

ದ್ವೀಪಗಳಲ್ಲಿ ತ್ರಿನಿದಾದ, ಬಾರ್ಬೆದೋಜ ಎಂಬೆರಡು ದ್ವೀಪಗಳೂ, ಫ್ರೆಂಚರ ದ್ವೀಪಗಳಲ್ಲಿ ಮಾರ್ತಿನಿಕ, ಗ್ವಾದಾಲೂಪ ಎಂಬವುಗಳೂ ಮುಖ್ಯವುಂಟ.

**ವ್ಯಾಪಾರದ ಜೀನಸುಗಳು:**—ಸಕ್ಕರೆ, ಬುಂದು, ತಂಬಾಕ, ಶುಂಠಿ, ಹತ್ತಿ ಮುಂತಾದ ಸರಕುಗಳು ಪರಸ್ಥಳಕ್ಕೆ ಹೋಗುತ್ತವೆ.

**೪. ಬರ್ಮ್ಯೂಡಾ ದ್ವೀಪಗಳು:**—ಇವು ಯುನೈತೆದಸ್ತೇತ್ಸ ರಾಜ್ಯದ ಪೂರ್ವಕ್ಕೆ ಅತ್ಲಾಂತಿಕ ಮಹಾಸಾಗರದಲ್ಲಿ ಇರುತ್ತವೆ. ಈ ೩೦೦ ದ್ವೀಪಗಳ ಗುಂಪು ಇಂಗ್ಲೀಷರ ವಶದಲ್ಲಿ ಇರುತ್ತದೆ.

## ೨. ದಕ್ಷಿಣ ಅಮೇರಿಕ.

ಈ ಖಂಡವು ಉತ್ತರದಲ್ಲಿ ಮಾತ್ರ ಪಾನಾಮಾ ಎಂಬ ಸಂಯೋಗಭೂಮಿಯಿಂದ ಉತ್ತರ ಅಮೇರಿಕಕ್ಕೆ ಜೋಡಿಸಲ್ಪಟ್ಟದೆ. ಉಳಿದ ಕಡೆಯಲ್ಲೆಲ್ಲ ಈ ಖಂಡವನ್ನು ನೀರು ಸುತ್ತುಗಟ್ಟಿರುತ್ತದೆ. ಅದು ಹ್ಯಾಗಂದರೆ— ಉತ್ತರದಲ್ಲಿ ಕಾರಿಬಿಯನ್‌ಸಮುದ್ರ, ಪಶ್ಚಿಮಕ್ಕೆ ಫಾಸಿಫಿಕ್ ಮಹಾಸಾಗರ, ದಕ್ಷಿಣಕ್ಕೆ ದಕ್ಷಿಣಮಹಾಸಾಗರ, ಪೂರ್ವಕ್ಕೆ ಅತಲಾಂತಿಕ ಮಹಾಸಾಗರ.

**ದಕ್ಷಿಣ ಅಮೇರಿಕದಲ್ಲಿ ೧೨ ದೇಶಗಳಿವೆ:**— ೧. ಪಾನಾಮಾ, ೨. ಕೋಲಂಬಿಯಾ, ೩. ವೆನೆಜುಯೆಲಾ, ೪. ಇಕ್ವೆದೋರ, ೫. ಗಿಯಾನಾ, ೬. ಬ್ರಾಜಿಲ್, ೭. ಪೆರೂ, ೮. ಬೊಲಿವಿಯಾ, ೯. ಚಿಲೀ, ೧೦. ಆರ್ಜೆಂತೈನ ಕಾನಫೆದರೇಶನ್, ೧೧. ಪಾರಾಗ್ವೆ, ೧೨. ಯುರಾಗ್ವೆ.

**ಸಮುದ್ರಗಳು:**— ಕಾರಿಬಿಯನ್‌ಸಮುದ್ರವು, ವೆಸ್ತ ಇಂದೀಜ ದ್ವೀಪಗಳಿಗೂ ದಕ್ಷಿಣ ಅಮೇರಿಕಕ್ಕೂ ನಡುವೆ ಇರುತ್ತದೆ.

**ಪರ್ವತಗಳು:**—ಆಂದಿಜಪರ್ವತದ ಸಾಲು ಸೆಂತ್ರಲ್ ಅಮೇರಿಕದಿಂದ ದಕ್ಷಿಣ ಅಮೇರಿಕದಲ್ಲಿ ಸೇರಿ, ಅದರ ಪಶ್ಚಿಮ ದಂಡೆಗುಂಟ ಎಡೆಬಿಡದೆ ದಕ್ಷಿಣ ತುದಿಯವರೆಗೆ ಹೋಗಿರುತ್ತದೆ. ಇದೇ ಪರ್ವತಾವಳಿಗೆ ಉತ್ತರ ಅಮೇರಿಕದಲ್ಲಿ ರಾಕೀಪರ್ವತವೆಂದೆನ್ನುತ್ತಾರೆ.

## ೧ ಪಾನಾಮಾ

ಸನ್೧೯೦೩ ರ ವರೆಗೆ ಇದು ಕೋಲಂಬಿಯದ ಭಾಗವಾಗಿತ್ತು; ಆದರೆ ಈಗ ಸ್ವತಂತ್ರವಾದ ಪ್ರಜಾಸತ್ತಾತ್ಮಕ ರಾಜ್ಯವಾಗಿದೆ. ಈ ದೇಶದಲ್ಲಿ ನೀರು ವಿಪುಲವಾಗಿದ್ದು ಭೂಮಿ ಒಳ್ಳೆ ಬೆಳೆಯುಳ್ಳದ್ದಾಗಿದೆ.

**ಪಟ್ಟಣಗಳು:**—ಕಾರಿಬಿಯನ್ ಸಮುದ್ರದ ಧಡದಲ್ಲಿ ಪಾನಾಮಾ ಬಂದರವೂ ಪಾಸಿಫಿಕದ ಧಡದಲ್ಲಿ ಕೋಲೋನ ಬಂದರವೂ ಮುಖ್ಯ ಪಟ್ಟಣಗಳಾಗಿವೆ. ಈ ಎರಡು ಬಂದರಗಳ ನಡುವೆ ಹಾಯಿಸಿ ಪಾನಾಮಾ ಕಾಲುವೆಯನ್ನು ಕಡಿದಿರುತ್ತಾರೆ.

**ವ್ಯಾಪಾರದ ಜಿನಸುಗಳು:**—ರಬ್ಬರು, ಕಾಫಿ, ಕೋಕೋಗಳು ಪರದೇಶಕ್ಕೆ ಹೋಗುತ್ತವೆ.

## ೨ ಕೋಲಂಬಿಯಾ

ಇದು ಪ್ರಜಾಸತ್ತಾತ್ಮಕ ರಾಜ್ಯವದೆ; ರಾಜಧಾನಿಯು ಬೊಗೊತಾ ಎಂಬ ಪಟ್ಟಣವಿದೆ.

**ಹೊಳೆಗಳು:**—ಮಾಗದಾಲಿನಾ ಎಂಬ ಹೊಳೆಯು ಅಂದಿಜ ಪರ್ವತದಲ್ಲಿ ಉಗಮವಾಗಿ, ಕಾರಿಬಿಯನ್ ಸಮುದ್ರಕ್ಕೆ ಕೂಡುತ್ತದೆ.

**ಆಖಾತಗಳೂ ಉಪಸಾಗರಗಳೂ:**— ದಾರಿಯನ್ನದ ಆಖಾತವು ಕಾರಿಬಿಯನ್ ಸಮುದ್ರದೊಳಗೆ ಇರುತ್ತದೆ; ಪಾನಾಮದ ಉಪಸಾಗರವು ಅದೇ ಹೆಸರಿನ ಸಂಯೋಗಭೂಮಿಯ ಪಶ್ಚಿಮಕ್ಕಿರುತ್ತದೆ.

**ವ್ಯಾಪಾರದ ಜಿನಸುಗಳು:**—ಹತ್ತಿ, ನೀಲಿ, ರಬ್ಬರು, ಒಂದು ಬಗೆಯ ಔಷಧದ ತೊಗಟೆ, ಇವೇ ಮುಖ್ಯ ಸರಕುಗಳುಂಟು.

## ೩. ವೆನೆಜುಯೆಲಾ.

ಇದು ಪ್ರಜಾಸತ್ತಾತ್ಮಕ ರಾಜ್ಯವದೆ. ಕಾರಾಕಾಸ ಎಂಬ ಪಟ್ಟಣವು ಇದರ ರಾಜಧಾನಿಯುಂಟು.

**ಹೊಳೆಗಳು:**—ಒರಿನೋಕೊ ಎಂಬ ಪ್ರಸಿದ್ಧ ಹೊಳೆಯು ಅತ್‌ಲಾಂತಿಕಕ್ಕೆ ಕೂಡುತ್ತದೆ.

**ಆಖಾತಗಳು:**—ವೆನೆಜುಯೆಲಾದ ಆಖಾತವು ಕಾರಿಬಿಯನ್ ಸಮುದ್ರದಲ್ಲಿ ಇರುತ್ತದೆ.

**ಸರೋವರಗಳು:**—ಮಾರಾಕೆಬೋ ಎಂಬ ಸರೋವರವು ಮುಖ್ಯವದೆ. ಈ ದೇಶದಿಂದ ಮುಖ್ಯವಾಗಿ ಅರಳೆಯು ಪರಸ್ಥಳಕ್ಕೆ ಹೋಗುತ್ತದೆ.

## ೪ ಇಕ್ವೆದೋರ

ಇದು ಪ್ರಜಾಸತ್ತಾತ್ಮಕ ರಾಜ್ಯವದೆ. ಇದರ ರಾಜಧಾನಿಯು ಕೀತೋ ಎಂಬ ಪಟ್ಟಣವದೆ.

**ಪರ್ವತಗಳು:**—ಕೊತೊಪಾಕ್ಸಿ, ಚಿಂಬೊರಾಜೋ ಎಂಬ ಪರ್ವತಗಳು ಆಂದಿಜಪರ್ವತದ ಸಾಲಿನಲ್ಲಿ ಇರುತ್ತವೆ.

**ಉಪಸಾಗರಗಳು:**—ಗ್ವಾಯಾಕ್ವಿಲದ ಉಪಸಾಗರವು ಪಾಸಿಫಿಕ್ ಮಹಾಸಾಗರದಲ್ಲಿ ಇದೆ.

**ವ್ಯಾಪಾರದ ಜಿನಸುಗಳು:**—ತೆಂಗು, ರಬ್ಬರು, ಔಷಧದ ತೋಟ ಮುಂತಾದವುಗಳುಂಟು.

## ೫ ಗಿಯಾನಾ

ಇದರಲ್ಲಿ ಮೂರು ಭಾಗಗಳುಂಟು. ಅವುಗಳ ಹೆಸರುಗಳು:—

೧. ಬ್ರಿತಿಶ ಗಿಯಾನಾ; ರಾಜಧಾನಿ ಜಾರ್ಜತೌನ
೨. ದಚ್ಚ ಗಿಯಾನಾ; ,, ಪಾರಾಮಾರಿಬೋ
೩. ಫ್ರೆಂಚ ಗಿಯಾನಾ; ,, ಕಾಯೆನಿ.

**ಹೊಳೆಗಳು:**—ಎಸೆಕ್ವಿಬೋ, ಸುರಿನಾಮು, ಎಂಬ ಹೊಳೆಗಳು ಆತ್‌ಲಾಂತಿಕಕ್ಕೆ ಕೂಡುತ್ತವೆ.

**ವ್ಯಾಪಾರದ ಜಿನಸುಗಳು:**—ಸಕ್ಕರೆ, ಕಾಕವಿ, ಮದ್ಯ, ಬುಂದು, ಮೆಣಸಿನಕಾಯಿ, ಅರಳೆ, ಮಸಾಲೆಗಳು ಔಷಧಗಳು ಮುಂತಾದವುಗಳುಂಟು.

## ೬ ಬ್ರಾಜಿಲ್

ಈ ದೇಶದಲ್ಲಿ ಸನ್ ೧೫೩೦ ರಲ್ಲಿ ಪೋರ್ತುಗೀಜರು ವಸಹಾತು ಮಾಡಿದರು. ಮುಂದೆ ಸನ್ ೧೮೨೨ ರಲ್ಲಿ ಪೊರ್ತುಗಾಲದ

ಅರಸುಮನೆತನದವನೊಬ್ಬನು ಬಾದಶಹನಾಗಿ ಈ ದೇಶವನ್ನು ಸ್ವತಂತ್ರತೆಯಿಂದ ಆಳಹತ್ತಿದನು; ಆದರೆ ಸನ್ ೧೮೮೯ ರಲ್ಲಿ ಇದು ಪ್ರಜಾಸತ್ತಾತ್ಮಕ ರಾಜ್ಯವಾಯಿತು.

**ಪಟ್ಟಣಗಳು:**—ರಿಓದೆಜಾನ್ಹೈರೊ ಎಂಬ ದೊಡ್ಡ ಬಂದರವು ಈ ದೇಶದ ರಾಜಧಾನಿಯುಂಟು. **ಬಾಹಿಯಾ ಊರ್ಫ ಸಾನ್ ಸಾಲ್ವಾದೋರ** ಎಂಬ ಬಂದರವು, ಆಲ್ಸೇಂತ್ಸಬೇ ಎಂಬ ಉಪಸಾಗರದ ದಂಡೆಯಲ್ಲಿ ಇರುತ್ತದೆ. ರೆಸಿಫೀ ಊರ್ಫ ಪೆರ್ನಾಂಬೂಕೊ ಎಂಬ ಬಂದರವು ಬಾಹಿಯಾದ ಉತ್ತರಕ್ಕಿರುತ್ತದೆ.

**ಹೊಳೆಗಳು:**—ಅಮಾಜೋನನದಿಯು ನೈಲನದಿಯ ಹೊರ್ತು ಭೂಮಿಯಲ್ಲಿ ಎಲ್ಲಕ್ಕೂ ದೊಡ್ಡ ನದಿಯುಂಟು. ಇದು ಆಂದಿಜಪರ್ವತದಲ್ಲಿ ಉಗಮವಾಗಿ ಅತ್‌ಲಾಂತಿಕಕ್ಕೆ ಕೂಡುತ್ತದೆ. ಇದರ ಹೊರ್ತು ತೊಕಾಂತಿನ್ಸ್, ಸಾನ್‌ಫ್ರಾನ್ಸಿಸ್ಕೊ ಎಂಬ ಹೊಳೆಗಳು ದೊಡ್ಡವಿರುತ್ತವೆ.

**ಭೂಶಿರಗಳು:**—ಕೇಪಸೇಂತರೊಕ ಎಂಬ ಭೂಶಿರವು ಪೂರ್ವ ದಂಡೆಯಲ್ಲಿರುತ್ತದೆ.

**ವ್ಯಾಪಾರದ ಜೀನಸುಗಳು:**—ಅರಳೆ, ಸಕ್ಕರೆ, ಬೆಳ್ಳಿ, ಬಂಗಾರ, ರತ್ನಗಳು, ಮುಂತಾದವುಗಳುಂಟು.

## ೭ ಪೇರೂ

ಇದು ಪ್ರಜಾಸತ್ತಾತ್ಮಕ ರಾಜ್ಯವದೆ. ರಾಜಧಾನಿಯು **ಲೀಮಾ** ಪಟ್ಟಣವು. **ಕುಝ್ ಕೋ** ಎಂಬ ಪಟ್ಟಣವು ಪೂರ್ವಕಾಲದ ರಾಜಧಾನಿಯುಂಟು. ಲೀಮಾ ಪಟ್ಟಣದ ಉತ್ತರದಲ್ಲಿ **ಕಾಲಾವ** ಎಂಬ ಬಂದರವದೆ.

**ಪರ್ವತಗಳು:**—ಆಂದಿಜ ಪರ್ವತವು ಈ ದೇಶದೊಳಗಿಂದ ದಕ್ಷಿಣಕ್ಕೆ ಹೋಗಿರುತ್ತದೆ.

**ಸರೋವರಗಳು:**—ತಿತಿಕಾಕಾ ಎಂಬ ಸರೋವರವು ದಕ್ಷಿಣ ಮೇರೆಯಲ್ಲಿ ಇರುತ್ತದೆ.

**ವ್ಯಾಪಾರದ ಜೀನಸುಗಳು:**—ಸೋರುಪ್ಪು, ಅಲ್‌ಪಾಕದ

ಉಣ್ಣೆ, ಧಾತುಗಳು, ರತ್ನಗಳು ಗ್ವಾನೊ ✻ಮುಂತಾದವುಗಳುಂಟು.

## ೮ ಬೊಲಿವಿಯಾ

ಇದಾದರೂ ಪ್ರಜಾಸತ್ತಾತ್ಮಕ ರಾಜ್ಯವೇ. ರಾಜಧಾನಿಯು **ಒರೂರೊ** ಪಟ್ಟಣವದೆ. ಇದಲ್ಲದೆ **ಲಾಪಾಜ, ಚೂಕಿಸಾಕಾ** ಮುಂತಾದ ದೊಡ್ಡ ಪಟ್ಟಣಗಳಿವೆ. **ಪೊತೋಸಿ** ಎಂಬ ಪಟ್ಟಣದಲ್ಲಿ ಪ್ರಸಿದ್ಧವಾದ ಬೆಳ್ಳಿಯ ಕಣಿಗಳುಂಟು.

**ಪರ್ವತಗಳು:**—ಸೊರಾತಾ, ಇಲಿಮಾನೀ ಇವೆರಡು ಆಂದಿಜಪರ್ವತದಲ್ಲಿ ಎತ್ತರವಾದ ಶಿಖರಗಳುಂಟು.

**ಸರೋವರಗಳು:**—ತಿತಿಕಾಕಾ ಎಂಬ ಸರೋವರವು ಉತ್ತರ ಮೇರೆಯಲ್ಲಿ ಇರುತ್ತದೆ.

**ವ್ಯಾಪಾರದ ಜೀನಸುಗಳು:**— ಬೆಳ್ಳಿ, ತಾಮ್ರ, ತವರು, ಬೇರೆ ಲೋಹಗಳು ತೆಂಗು, ಬುಂದು, ಅಲ್‌ಪಾಕದ ಉಣ್ಣೆ, ಔಷಧದ ತೋಟೆ ಮುಂತಾದವುಗಳುಂಟು.

## ೯ ಚಿಲೀ

ಇದೂ ಪ್ರಜಾಸತ್ತಾತ್ಮಕ ರಾಜ್ಯವದೆ. ರಾಜಧಾನಿಯು **ಸಾಂತಿಯಾಗೊ-ದೆ-ಚಿಲಿ** ಎಂಬ ಪಟ್ಟಣವದೆ; **ವಾಲಾಎರ್ೈಸೊ** ಮುಖ್ಯ ಬಂದರವು.

**ಪರ್ವತಗಳು:**— ಆಂದಿಜಪರ್ವತವು ಈ ದೇಶದೊಳಗಿಂದ ದಕ್ಷಿಣಕ್ಕೆ ಹೋಗಿರುತ್ತದೆ.

**ದ್ವೀಪಗಳು:**—ಚಿಲೊಯೀ, ಜೂವಾನ ಫರ್ನಾನದೀಜ, ಇವೆರಡು ಮುಖ್ಯ ದ್ವೀಪಗಳುಂಟು.

**ವ್ಯಾಪಾರದ ಜೀನಸುಗಳು:**— ಬೆಳ್ಳಿ, ತಾಮ್ರ, ಗೋಧಿ, ಅರಳೆ, ಉಣ್ಣೆ, ಮುಂತಾದವುಗಳುಂಟು.

---

✻ ಪೇರೂದೇಶದ ಪಶ್ಚಿಮದಲ್ಲಿದ್ದ ದ್ವೀಪಗಳಲ್ಲಿ ಹಕ್ಕಿಗಳ ಹೇಲು ಸಿಕ್ಕುತ್ತದೆ. ಅದಕ್ಕೆ ಗ್ವಾನೋ ಎನ್ನುತ್ತಾರೆ. ಇದರಿಂದ ಹೊಲಕ್ಕೆ ಮೇಲಾದ ಗೊಬ್ಬರವಾಗುತ್ತದೆ.

ಈ ದೇಶದ ದಕ್ಷಿಣಕ್ಕೆ ಹಲವು ನಡುಗಡ್ಡೆಗಳಿವೆ. ಅವುಗಳಲ್ಲಿ ತೆರಾದೆಲ್‌ಫುಯೆಗೊ, ಸ್ತ್ರಾತೆನ್, ಫಾಕಲಂದ ದ್ವೀಪಗಳು, ಸೌಥ ಜಾರ್ಜಿಯಾ, ಇವು ಮುಖ್ಯವುಂಟು. ತೆರಾದೆಲ್‌ಫುಯೆಗೋ ಎಂಬ ಹೆಸರಿನ ದ್ವೀಪಗಳು ಬಹಳವುಂಟು. ಈ ಗುಂಪಿನಲ್ಲಿ ಪೂರ್ವದ ಅರ್ಧವು ಅರ್ಜೆಂತೈನಕ್ಕೂ ಪಶ್ಚಿಮದ ಅರ್ಧವು ಚಿಲೀಗೂ ಸೇರಿರುತ್ತವೆ. ಈ ದ್ವೀಪಗಳಿಗೂ ಪಾತಾಗೋನಿಯಾದ ದಂಡೆಗೂ ನಡುವೆ ಮಾಗೆಲನ್ನನ ಸಾಮುದ್ರಧುನಿಯುಂಟು. ಈ ದ್ವೀಪಗಳಲ್ಲಿ ತೀರ ದಕ್ಷಿಣಕ್ಕಿರುವ ದ್ವೀಪದ ದಕ್ಷಿಣ ತೀರದಲ್ಲಿ ಕೇಪ ಹಾರ್ನ ಎಂಬ ಭೂಶಿರವುಂಟು. ಅದು ಅಮೇರಿಕ ಖಂಡದ ದಕ್ಷಿಣ ಬಿಂದುವೆಂದು ಎಣಿಸಲ್ಪಡುತ್ತದೆ. ಈ ದ್ವೀಪದ ಹತ್ತರ ಸಮುದ್ರದೊಳಗೆ ಬಿರುಗಾಳಿ ಬಹಳ ಇರುವ ಕಾರಣ ಹಡಗುಗಳು ಬಹುತರ ಮಾಗೆಲನ್ನನ ಸಾಮುದ್ರಧುನಿಯೊಳಗಿಂದ ಹೋಗುತ್ತವೆ.

ಫಾಕಲಂದ ದ್ವೀಪಗಳು ಇಂಗ್ಲಿಷರ ವಶದಲ್ಲಿರುತ್ತವೆ. ಆದರೆ ಅಲ್ಲಿ ಜನರ ವಸ್ತಿಯು ಬಹು ಸ್ವಲ್ಪವಿರುತ್ತದೆ.

## ೧೦ ಅರ್ಜೆಂತೈನ ಪ್ರಜಾಸತ್ತಾತ್ಮಕ ರಾಜ್ಯ.

ಈ ಪ್ರಜಾಸತ್ತಾತ್ಮಕ ರಾಜ್ಯದ ರಾಜಧಾನಿಯಾದ ಬುಎನೊಸ್ ಐರೇಸ ಎಂಬ ಪಟ್ಟಣವು ರಿಓ-ದೆ-ಲಾಪ್ಲಾತಾ ಎಂಬ ಒತ್ತಿನ ಮೇಲೆ ಇರುತ್ತದೆ.

**ಹೊಳೆಗಳು**:—ಪಾರಾನಾ ಹೊಳೆಯು ಈ ದೇಶದಲ್ಲಿ ಹರಿದು ರಿಓ-ದೆ-ಲಾಪ್ಲಾತಾ ಎಂಬ ಕೊಲ್ಲಿಗೆ ಕೂಡುತ್ತದೆ.

**ವ್ಯಾಪಾರದ ಜಿನಸುಗಳು**:—ಚರ್ಮ, ನೆಣ.

ಪಾತಾಗೋನಿಯವು ಈಗ ಈ ರಾಜ್ಯಕ್ಕೆ ಸೇರಿದೆ.

## ೧೧ ಪಾರಾಗ್ವೆ

ಈ ರಾಜ್ಯವನ್ನು ಪ್ರಜೆಗಳೇ ಆಳುತ್ತಾರೆ. ಅಸನ್‌ಶಿಅನ್ನೆಂಬ ರಾಜಧಾನಿಯು ಪಾರಾಗ್ವೆ ಹೊಳೆಯ ದಂಡೆಯಲ್ಲಿರುತ್ತದೆ.

**ಹೊಳೆಗಳು**:—ಪಾರಾಗ್ವೆ, ಪಾರಾನಾ, ಇವೆರಡು ಮುಖ್ಯ ಹೊಳೆಗಳುಂಟು. ಈ ದೇಶದ ಪಶ್ಚಿಮ ಮೇರೆಯಲ್ಲಿ ಪಾರಾಗ್ವೆಯೂ

ಪೂರ್ವ ದಕ್ಷಿಣ ಮೇರೆಗಳಲ್ಲಿ ಪಾರಾನಾ ಹೊಳೆಯೂ ಹರಿದು, ಕಡೆಯಲ್ಲಿ ನೈಋತ್ಯ ಮೂಲೆಯಲ್ಲಿ ಅವೆರಡೂ ಕೂಡುತ್ತವೆ.

**ವ್ಯಾಪಾರದ ಜೀನಸುಗಳು**:—ಚಹಾ, ತಂಬಾಕ, ಚರ್ಮಗಳು.

## ೧೨ ಯುರಾಗ್ವೆ

ಇದೂ ಪ್ರಜಾಸತ್ತಾತ್ಮಕ ರಾಜ್ಯವೇ. ಇದರ ರಾಜಧಾನಿಯಾದ **ಮಾಂತೆವಿದಿಯೊ** ಎಂಬ ಪಟ್ಟಣವು ರಿಓ-ದೆ-ಲಾಪ್ಲಾತಾದ ಮುಖದ ಹತ್ತಿರ ಅದೆ.

**ಹೊಳೆಗಳು**:—ಯುರಾಗ್ವೆ ಹೊಳೆಯು ಈ ದೇಶದ ಪಶ್ಚಿಮ ಮೇರೆಯಲ್ಲಿ ಹರಿದು ರಿಓ-ದೆ-ಲಾಪ್ಲಾತಕ್ಕೆ ಕೂಡುತ್ತದೆ.

**ವ್ಯಾಪಾರದ ಜೀನಸುಗಳು**:—ಚರ್ಮ, ನೆಣ, ಎಲುಬು, ಉಣ್ಣಿ.

ಆರ್ಜೆಂತೈನ, ಪಾರಾಗ್ವೆ, ಯುರಾಗ್ವೆ, ಇವು ಮೂರಕ್ಕೆ ಲಾಪ್ಲಾತದ ಸಂಸ್ಥಾನಗಳೆಂದು ಅನ್ನುತ್ತಾರೆ.

---

# ೬ ನೆಯ ಭಾಗ.

# ಓಶಿಯಾನಿಯಾ

ಪಾಸಿಫಿಕ್ ಮಹಾಸಾಗರದಲ್ಲಿ ಇರುವ ಅಸಂಖ್ಯ ದ್ವೀಪಗಳಿಗೆಲ್ಲ ಕೂಡಿ ಓಶಿಯಾನಿಯಾ ಎಂಬ ಹೆಸರು ಕೊಡಲ್ಪಟ್ಟದೆ.

ಈ ದ್ವೀಪಸಮುದಾಯದೊಳಗೆ ಐದು ಭಾಗಗಳು ಮಾಡಲ್ಪಟ್ಟವೆ. ಅವು.— ೧. ಮಲಾಯಾಶಿಯಾ, ೨. ಆಸ್ಟ್ರೇಲೇಶಿಯಾ, ೩. ಮೆಲಾನೇಶಿಯಾ, ೪ ಮೈಕ್ರೋನೇಶಿಯಾ, ೫. ಪೊಲಿನೀಶಿಯಾ

## ೧ ಮಲಾಯಾಶಿಯಾ (ಮಲಾಯೀ ಜನರ ದ್ವೀಪಗಳು)

ಏಶಿಯ ಖಂಡದ ಆಗ್ನೇಯಕ್ಕೆ ಪಾಸಿಫಿಕ್ ಮಹಾಸಾಗರದಲ್ಲಿ ಇರುವ ದ್ವೀಪಗಳಿಗೆ ಮಲಾಯಾಶಿಯಾ, ಅಥವಾ ಪೂರ್ವದಿಕ್ಕಿನ

ದ್ವೀಪಸಮೂಹ ಎಂಬ ಹೆಸರುಂಟು. ಮಲಾಯಾಶಿಯಾ ದ್ವೀಪಗಳು ಓಶಿಯಾನಿಯಾ ದ್ವೀಪಸಮೂಹದ ವಾಯುವ್ಯ ಭಾಗವುಂಟು. ಅವುಗಳಲ್ಲಿ ೫ ಗುಂಪುಗಳಿವೆ.

| ಗುಂಪು. | | ಮುಖ್ಯ ದ್ವೀಪಗಳು. |
|---|---|---|
| ೧. ಸಂದಾ ದ್ವೀಪಗಳು. | ... | ಸುಮಾತ್ರಾ, ಜಾವಾ |
| ೨. ಬೋರ್ನಿಓ ದ್ವೀಪಗಳು. | ... | ಬೋರ್ನಿಓ |
| ೩. ಸೆಲಿಬೀಜ ದ್ವೀಪಗಳು. | ... | ಸೆಲಿಬೀಜ |
| ೪. ಮೊಲಕ್ಕಾ ಅಥವಾ ಮಸಾಲೆಯ ದ್ವೀಪಗಳು. | ... | ಅಂಬೋಯನಾ, |
| ೫. ಫಿಲಿಪೈನ ದ್ವೀಪಗಳು. | ... | ಲೂಜೋನ |

ಈ ದ್ವೀಪಗಳಲ್ಲೆಲ್ಲ ಮಲಾಯಿ ಜನರ ವಸ್ತಿಯೇ ಬಹಳ ಉಂಟು. ಇವುಗಳಲ್ಲಿ ಬೆಳೆಯು ಸರಸಾಗಿ ಬರುತ್ತದೆ. ದಾಲಚಿನ್ನಿ, ಲವಂಗ ಮುಂತಾದ ಮಸಾಲೆಯ ಪದಾರ್ಥಗಳು, ಸಕ್ಕರೆ, ಬುಂದು, ನೀಲಿ, ಅಕ್ಕಿ, ತಂಬಾಕ ಮುಂತಾದವುಗಳು ವಿಶೇಷವಾಗಿ ಬೆಳೆಯುತ್ತವೆ.

೧. **ಸಂದಾ ದ್ವೀಪಗಳು:**—ಸುಮಾತ್ರಾ ದ್ವೀಪವು ಮಲಾಯಾಶಿಯಾ ಗುಂಪಿನ ತೀರ ಪಶ್ಚಿಮ ತುದಿಯಲ್ಲಿ, ಮಲಾಯಾ ದ್ವೀಪಕಲ್ಪದ ದಕ್ಷಿಣಕ್ಕೆ ಇರುತ್ತದೆ. ಇದಕ್ಕೂ ಮಲಾಯಾ ದ್ವೀಪಕಲ್ಪಕ್ಕೂ ನಡುವೆ ಮಲಾಕ್ಕಾದ ಸಾಮುದ್ರಧುನಿಯುಂಟು. ಈ ದ್ವೀಪದ ಉತ್ತರ-ಪೂರ್ವ-ಭಾಗಗಳಲ್ಲಿ ಅಲ್ಲಿಯ ನಿವಾಸಿಗಳ ಸಂಸ್ಥಾನಗಳುಂಟು. ಅವುಗಳಲ್ಲಿ ಅಚೀನ, ಸಿಆಕ ಎಂಬೆರಡು ಸಂಸ್ಥಾನಗಳು ಪ್ರಮುಖವುಂಟು. ಉಳಿದ ಯಾವತ್ತು ಭಾಗವು ಡಚ್ಚರ ಅಧಿಕಾರಕ್ಕೆ ಸೇರಿದೆ. **ಪಾದಾಂಗ, ಬೆನಕೋಲೇನ** ಎಂಬ ಪಟ್ಟಣಗಳು ಡಚ್ಚರ ಮುಖ್ಯ ಸಂಸ್ಥಾನವುಂಟು.

**ಜಾವಾ** ದ್ವೀಪವು ಸುಮಾತ್ರಾದ ದಕ್ಷಿಣಕ್ಕಿರುತ್ತದೆ; ಅದಕ್ಕೂ ಸುಮಾತ್ರಾಕ್ಕೂ ನಡುವೆ ಸಂದಾ ಎಂಬ ಸಾಮುದ್ರಧುನಿ

ಯುಂಟು. ಈ ದ್ವೀಪವು ಡಚ್ಚರ ವಶದಲ್ಲಿರುತ್ತದೆ. ಅವರ ರಾಜಧಾನಿಯು **ಬಾತಾವಿಯಾ** ಪಟ್ಟಣವುಂಟು. ಈ ಸಮುದಾಯದೊಳಗಿನ ತೈಮೋರ ಎಂಬ ಒಂದು ಸಣ್ಣ ದ್ವೀಪದ ಅರ್ಧಭಾಗವು ಪೋರ್ತುಗೀಜರ ವಶದಲ್ಲಿ ಉಂಟು. ಓಶಿಯಾನಿಯಾದಲ್ಲಿ ಪೋರ್ತುಗೀಜರ ರಾಜ್ಯವು ಇಷ್ಟೇ.

೨. **ಬೋರ್ನಿಓ ದ್ವೀಪಗಳು:**—ಇವುಗಳಲ್ಲಿ ಬೋರ್ನಿಓ ದ್ವೀಪವು ಎಲ್ಲಕ್ಕೂ ದೊಡ್ಡದಿರುತ್ತದೆ. ಈ ದ್ವೀಪದ ಅರ್ಧಕ್ಕಿಂತ ಹೆಚ್ಚು ಭಾಗವನ್ನು ಡಚ್ಚರು ಆಕ್ರಮಿಸಿರುತ್ತಾರೆ. ಆದರೆ ಇದರೊಳಗಿನ ಸಾರಾವಕ ಎಂಬ ಪ್ರಾಂತವೂ, ಈ ದ್ವೀಪದ ಉತ್ತರದಲ್ಲಿರುವ ಲಾಬುವಾನ ಎಂಬ ನಡುಗಡ್ಡೆಯೂ ಇಂಗ್ಲಿಷರ ವಶದಲ್ಲುಂಟು.

೩. **ಸೆಲಿಬೀಜ ದ್ವೀಪಗಳು:**—ಇವುಗಳಲ್ಲಿ ಎಲ್ಲಕ್ಕೂ ದೊಡ್ಡದಾದ ಸೆಲಿಬೀಜ ದ್ವೀಪವು ಡಚ್ಚರ ಕೈಯಲ್ಲಿರುತ್ತದೆ.

ಇದರಲ್ಲಿ ಮೆನಾದೊ, ಮಕ್ಕಾಸರ ಎಂಬೆರಡು ಮುಖ್ಯ ಪಟ್ಟಣಗಳುಂಟು.

೪. **ಮೊಲಕ್ಕಾ ಅಥವಾ ಮಸಾಲೆಯ ದ್ವೀಪಗಳು:**—ಇವಾದರೂ ಬಹುತರ ಯಾವತ್ತು ಡಚ್ಚರ ಸ್ವಾಧೀನದಲ್ಲಿ ಇರುತ್ತವೆ. ಇವುಗಳಲ್ಲಿ ಅಂಬೋಯಿನಾ ದ್ವೀಪವು ವ್ಯಾಪಾರದ ಮುಖ್ಯ ಸ್ಥಳವದೆ.

೫. **ಫಿಲಿಪೈನ ದ್ವೀಪಗಳು:**—ಮಲಾಯಾಶಿಯಾ ಗುಂಪಿನಲ್ಲಿ ಇವು ತೀರ ಉತ್ತರಕ್ಕಿರುತ್ತವೆ. ಇವೆಲ್ಲ ಬಹುತರ ಸಂಯುಕ್ತ ಸಂಸ್ಥಾನಗಳ ಸರಕಾರದ ವಶದಲ್ಲಿವೆ. ಇವುಗಳಲ್ಲಿ ಲೂಜೋನ ದ್ವೀಪವು ಎಲ್ಲಕ್ಕೂ ದೊಡ್ಡದುಂಟು. ಅದರಲ್ಲಿ **ಮಾನಿಲ್ಲಾ** ಎಂಬ ಪಟ್ಟಣವು ಮುಖ್ಯವದೆ.

## ೨ ಆಸ್ಟ್ರೇಲೇಶಿಯಾ (ಏಶಿಯದ ದಕ್ಷಿಣದ ದ್ವೀಪಗಳು)

ಈ ಗುಂಪು ಓಶಿಯಾನಿಯಾದ್ವೀಪ ಸಮೂಹದ ನೈಋತ್ಯದಲ್ಲಿರುತ್ತದೆ. ಈ ಸಮುದಾಯದಲ್ಲಿ ಆಸ್ಟ್ರೇಲಿಯಾ, ತಾಸ್ಮಾನಿಯಾ, ನ್ಯೂ

ಜೀಲಂದ ಎಂಬವು ಮೂರು ದ್ವೀಪಗಳು ಎಲ್ಲಕ್ಕೂ ದೊಡ್ಡವು.

೧. **ಆಸ್ಟ್ರೇಲಿಯಾ**:— ಈ ದ್ವೀಪಕ್ಕೆ ಮೊದಲು ನ್ಯೂಹಾಲಂದ ಎಂಬ ಹೆಸರು ಕೊಡಲ್ಪಟ್ಟಿತ್ತು. ಇದು ಭೂಮಿಯ ಮೇಲಿನ ಯಾವತ್ತು ದ್ವೀಪಗಳಿಗಿಂತ ದೊಡ್ಡದಿರುವ ಕಾರಣ ಇದಕ್ಕೆ ಮಹಾದ್ವೀಪವೆಂತಲೂ ಅನ್ನುವದುಂಟು. ಇದರ ಕ್ಷೇತ್ರಫಲವು ಯುರೋಪಖಂಡದ ೪/೫ ದಷ್ಟು ಇರುತ್ತದೆ.

**ಸಾಮುದ್ರಧುನಿಗಳು**:— ತಾರೀಸದ ಸಾಮುದ್ರಧುನಿಯು ಆಸ್ಟ್ರೇಲಿಯಾಕ್ಕೂ ನ್ಯೂಗಿನಿಗೂ ನಡುವೆ ಇರುತ್ತದೆ. ಬಾಸ ಎಂಬ ಸಾಮುದ್ರಧುನಿಯು ಆಸ್ಟ್ರೇಲಿಯಾಕ್ಕೂ ತಾಸ್ಮಾನಿಯಾಕ್ಕೂ ನಡುವೆ ಇರುತ್ತದೆ.

**ಆಖಾತಗಳು**:— ಕಾರ್ಪೆಂತಾರಿಯಾ ಎಂಬ ಆಖಾತವು ಉತ್ತರದಲ್ಲಿರುತ್ತದೆ. ಆಸ್ಟ್ರೇಲಿಯನ್ ಬಾಯಿತ ಎಂಬ ದೊಡ್ಡ ಆಖಾತವು ದಕ್ಷಿಣದಲ್ಲಿ ಇದೆ.

**ಸಮುದ್ರಗಳು**:— ಆಸ್ಟ್ರೇಲಿಯಾದ ಈಶಾನ್ಯ ದಂಡೆಗೂ ಸಾಲೋಮನ್ ದ್ವಿಪಗಳಿಗೂ ನಡುವೆ ಇರುವ ಸಮುದ್ರದಲ್ಲಿ ಪ್ರವಾಳ ಕೀಟಕಗಳಿಂದ ಆದ ಬಂಡೆಗಳೂ ಗಡ್ಡೆಗಳೂ ಇರುವ ಕಾರಣ ಅದಕ್ಕೆ ಪ್ರವಾಳ ( ಕಾರಲ್ ) ಸಮುದ್ರವೆನ್ನುತ್ತಾರೆ.

ಆಸ್ಟ್ರೇಲಿಯಾ ದ್ವೀಪವು ಇಂಗ್ಲಿಷರ ವಶದಲ್ಲಿ ಇರುತ್ತದೆ. ಅಲ್ಲಿಯ ವಸ್ತಿಯ ಮಾನದಿಂದ ಆ ದ್ವೀಪದಲ್ಲಿ ೫ ಭಾಗಗಳು ಮಾಡಲ್ಪಟ್ಟವೆ. ಅವುಗಳ ಗವರ್ನರರನ್ನು ಇಂಗ್ಲಂಡದ ಸರಕಾರದವರು ನೇಮಿಸಿರುತ್ತಾರೆ. ಆ ಭಾಗಗಳ ವಿವರ:—

| ವಿಭಾಗ. | | | ರಾಜಧಾನಿ. |
|---|---|---|---|
| ಕ್ವೀನ್ಸಲಾಂದ | ... | ... | ಬ್ರಿಸಬೇನ |
| ನ್ಯೂಸೌಥವೆಲ್ಸ | ... | ... | ಸಿದನಿ |
| ವಿಕ್ಟೋರಿಯಾ | ... | ... | ಮೆಲ್‌ಬೋರ್ನ |
| ದಕ್ಷಿಣ ಆಸ್ಟ್ರೇಲಿಯಾ | ... | ... | ಆದಲೆದ |
| ಪಶ್ಚಿಮ ಆಸ್ಟ್ರೇಲಿಯಾ | ... | ... | ಪರ್ಥ |

ಈ ದ್ವೀಪದಲ್ಲಿ ವ್ಯಾಪಾರವು ಬಹಳ ನಡೆಯುತ್ತದೆ. ಉಣ್ಣೆ, ಬಂಗಾರ, ತಾಮ್ರ, ತವರು, ಸೀಸ, ಎಣ್ಣೆ, ನೆಣ, ಚರ್ಮ, ಅರಳೆ ಸಕ್ಕರೆ, ಧಾನ್ಯಗಳು ಮುಂತಾದ ಸರಕುಗಳು ಪರಸ್ಥಳಕ್ಕೆ ಹೋಗುತ್ತವೆ.

ಈ ದ್ವೀಪದಲ್ಲಿ ಮೊದಲು ಕೆಲವು ಸಂಸ್ಥಾನಗಳಿದ್ದವು. ಅವನ್ನೆಲ್ಲ ಒಟ್ಟುಗೂಡಿಸಿ ಈಗ ಒಬ್ಬ ಗವರ್ನರ ಜನರಲ್ಲನ ಅಧಿಕಾರಕ್ಕೆ ಒಳಪಡಿಸಿರುವರು. ಈ ಸಂಯುಕ್ತ ರಾಜ್ಯಕ್ಕೆ ಕಾಮನ್‌ವೆಲ್ಥ (ಸಾಮಾನ್ಯ ಸಂಪತ್ತಿ) ಎಂಬ ಹೆಸರು ಕೊಡಲ್ಪಟ್ಟದೆ.

೨. **ತಾಸ್ಮಾನಿಯಾ**:--ಈ ದ್ವೀಪಕ್ಕೆ ಮೊದಲು ವಾಂದಿಮನ್ಸಲಾಂಡ ಎಂಬ ಹೆಸರು ಕೊಡಲ್ಪಟ್ಟಿತ್ತು ಈ ದ್ವೀಪದಲ್ಲಿ, ಇಂಗ್ಲಂಡದ ಸರಕಾರದವರಿಂದ ನೇಮಿಸಲ್ಪಟ್ಟ ಗವರ್ನರನು ಕಾರಭಾರ ನಡಿಸುತ್ತಾನೆ. ಇದರಲ್ಲಿ **ಹೋಬರ್ತತೌನ** ಎಂಬ ಮುಖ್ಯ ಪಟ್ಟಣವಿರುತ್ತದೆ. ಉಣ್ಣೆಯೇ ಈ ದ್ವೀಪದಲ್ಲಿ ಹೇರಳವಾಗಿ ಹುಟ್ಟುವ ವ್ಯಾಪಾರದ ಜೀನಸು.

೩. **ನ್ಯೂಜೀಲಂದ ದ್ವೀಪಗಳು**:--ಈ ದ್ವೀಪಗಳಲ್ಲಿ ಇಂಗ್ಲಿಷರು ಹೋಗಿ ನಿಂತಿರುತ್ತಾರೆ. ಇವು ಆಸ್ಟ್ರೇಲಿಯಾದ ಆಗ್ನೇಯೆಕ್ಕಿರುತ್ತವೆ. ಇವುಗಳಲ್ಲಿ ಎರಡು ದೊಡ್ಡ ದ್ವೀಪಗಳಿವೆ; ಉಳಿದವೆಲ್ಲ ಸಣ್ಣವು. ನಾರ್ಥಐಲಂದ ಎಂಬ ದ್ವೀಪದಲ್ಲಿ **ವೆಲಿಂಗತನ್** ಎಂಬ ಮುಖ್ಯ ಪಟ್ಟಣವದೆ.

ಉಣ್ಣೆ, ಬಂಗಾರ ಇವೆರಡು ಈ ದ್ವೀಪಗಳಲ್ಲಿ ವ್ಯಾಪಾರದ ಮುಖ್ಯ ಪದಾರ್ಥಗಳುಂಟು.

ನ್ಯೂಜೀಲಂದ ದ್ವೀಪಗಳಲ್ಲಿ ಮೂಲನಿವಾಸಿಗಳ ವಸ್ತಿಯು ಬಹಳ ಉಂಟು. ಅವರಿಗೆ ಮಾವೋರೀಜ ಎಂಬಹೆಸರುಂಟು. ಇವರು ಮಲಾಯಿ ಜನರಂಥವರಾಗಿ, ಆಸ್ಟ್ರೇಲೇಶಿಯಾ ದ್ವೀಪ ಸಮೂಹದೊಳಗಿನ ಇತರ ಜನರಿಗಿಂತ ಹೆಚ್ಚಿಗೆ ಸ್ಥಿತಿವಂತರಾಗಿದ್ದಾರೆ. ಇವರಲ್ಲಿ ಬಹುಜನರು ಒಕ್ಕಲತನ ಮುಂತಾದ ಉದ್ಯೋಗಗಳನ್ನು ಮಾಡುತ್ತಾರೆ.

ಆಸ್ಟ್ರೇಲೇಶಿಯಾದ ಗುಂಪಿನೊಳಗಿನ ಇತರ ದ್ವೀಪಗಳ ಸ್ಥಿತಿಯು ಹೆಚ್ಚಿಗೆ ತಿಳಿದಿಲ್ಲ; ಕೆಲವು ದ್ವೀಪಗಳೊಳಗಿನ ಜನರು ಪಾದ್ರಿಗಳ ಪ್ರಯತ್ನದಿಂದ ಸ್ವಲ್ಪ ಸುಧಾರಿಸಿದ್ದಾರೆ; ಆದರೆ ಬಹುತರ ಎಲ್ಲರೂ ತೀರ ಕಾಡು ಸ್ಥಿತಿಯವರುಂಟು.

## ೩ ಮೆಲಾನೇಶಿಯಾ

ಈ ಗುಂಪು ಆಸ್ಟ್ರೇಲೇಶಿಯಾದ ಉತ್ತರಕ್ಕಿರುತ್ತದೆ. ಈ ದ್ವೀಪ ಸಮುದಾಯದಲ್ಲಿ ನ್ಯೂಗಿನಿಯು ಎಲ್ಲಕ್ಕೂ ದೊಡ್ಡದು; ನ್ಯೂಕ್ಯಾಲೆದೋನಿಯಾ, ನ್ಯೂಹೆಬ್ರಿದೀಜ್, ಫೀಜೀ ದ್ವೀಪಗಳು, ಸಾಲೊಮನ್ ದ್ವೀಪಗಳು, ನ್ಯೂಬ್ರಿತನ್, ನ್ಯೂಆಯರ್ಲಂಡ ಮುಂತಾದ ಬೇರೆ ಸಣ್ಣ ನಡುಗಡ್ಡೆಗಳುಂಟು.

ಇಲ್ಲಿಯ ಮೂಲನಿವಾಸಿಗಳು ಕಪ್ಪು ಬಣ್ಣದವರು; ಆದರಿಂದ ಈ ಗುಂಪಿಗೆ ಮೆಲಾನೇಶಿಯಾ ಎಂದು ಹೆಸರು ಬಂದದೆ.

ಈ ದ್ವೀಪಗಳೊಳಗಿನ ಜನರು ಬಹುತರ ಕಾಡುಸ್ಥಿತಿಯುವರುಂಟು; ಆದರೆ ಕೆಲವು ದ್ವೀಪಗಳ ನಿವಾಸಿಗಳು ಪಾದ್ರಿಗಳ ಪ್ರಯತ್ನದಿಂದ ಸ್ವಲ್ಪ ಸುಧಾರಿಸಿದ್ದಾರೆ.

ನ್ಯೂಗಿನಿ ಅಥವಾ ಪಾಪುಆ ಎಂಬ ದ್ವೀಪದ ಪಶ್ಚಿಮ ಭಾಗವು ದಚ್ಚರ ವಶದಲ್ಲಿದೆ; ಆಗ್ನೇಯ ಭಾಗವು ಇಂಗ್ಲಂಡದ ವಶದಲ್ಲಿದೆ; ಈಶಾನ್ಯ ಭಾಗವು ಜರ್ಮನಿಯ ವಶದಲ್ಲಿದೆ. ನ್ಯೂಕ್ಯಾಲೆದೋನಿಯವನ್ನು ಫ್ರೆಂಚರು ಆಕ್ರಮಿಸಿದ್ದಾರೆ. ಫೀಜೀ ದ್ವೀಪಗಳು ಇಂಗ್ಲಿಷರ ಅಧಿಕಾರಕ್ಕೆ ಸೇರಿವೆ.

ನ್ಯೂಗಿನಿಯ ಸ್ಥಿತಿಯು ತೀರ ಸ್ವಲ್ಪ ಗೊತ್ತಾಗಿದೆ. ಅಲ್ಲಿಂದ ಗರಿಗಳು, ಮಸಾಲೆಯ ಸರಕುಗಳು, ಕಟ್ಟಿಗೆ ಮುಂತಾದವುಗಳು ಪರದೇಶಕ್ಕೆ ಹೋಗುತ್ತವೆ.

## ೪ ಮೈಕ್ರೊನೇಶಿಯಾ (ಸಣ್ಣ ದ್ವೀಪಗಳು)

ಈ ಗುಂಪು ಓಶಿಯಾನಿಯಾ ದ್ವೀಪಸಮುದಾಯದ ಈಶಾನ್ಯ ಭಾಗವದೆ; ಈ ಗುಂಪಿನಲ್ಲಿ ಸಣ್ಣ ಸಣ್ಣ ದ್ವೀಪಗಳ ಸಮುದಾಯ

ಗಳು ಅಸಂಖ್ಯವುಂಟು. ಅವುಗಳಲ್ಲಿ ೪ ಮುಖ್ಯ ಸಮುದಾಯುಗಳಿವೆ. ಅವುಗಳ ವಿವರ–

೧. ಬೋನಿನ್ ದ್ವೀಪಗಳು, ಜಪಾನದ ದಕ್ಷಿಣದಲ್ಲಿ.

೨. ಲಾದ್ರೋನ ಊರ್ಫ ಮರಿಯಾನ ದ್ವೀಪಗಳು, ಫಿಲಿಪ್ಪೈನ ದ್ವಿಪಗಳ ಪೂರ್ವದಲ್ಲಿ.

೩. ಪೆಲೂ, ಕಾರೋಲೈನ ಎಂಬ ದ್ವೀಪಗಳು, ಲಾದ್ರೋನ ದ್ವೀಪಗಳ ದಕ್ಷಿಣದಲ್ಲಿ.

೪. ಮಾರ್ಶಲದ್ವೀಪಗಳು,ಕಾರೋಲೈನ ದ್ವೀಪಗಳ ಪೂರ್ವದಲ್ಲಿ. ಮೈಕ್ರೋನೇಶಿಯಾ ದ್ವೀಪಗಳಲ್ಲಿಯ ಹವೆಯು ಮೇಲಾದದ್ದೂ ಭೂಮಿ ಬೆಳೆಯುಳ್ಳದ್ದೂ ಉಂಟು. ಲಾದ್ರೋನ; ಕಾರೋಲೈನ ದ್ವೀಪಗಳು ಸ್ಪೇನದವರಿಂದ ಜರ್ಮನಿಗೆ ಮಾರಲ್ಪಟ್ಟವು. ಅಲ್ಲಿಯ ಜನರು ಬಹುತರ ಸ್ಪಾನಿಶ ಜನರ ವಂಶಜರುಂಟು. ಉಳಿದ ಯಾವತ್ತು ದ್ವೀಪಗಳಲ್ಲಿ ಮಲಾಯೀ ಜನರು ವಾಸಿಸುತ್ತಾರೆ. ಇವರು ಮೊದಲು ತೀರ ತಿಳಿಗೇಡಿಗಳಾಗಿದ್ದರು. ಆದರೆ ಯುರೋಪದವರ ಸಹವಾಸದಿಂದಲೂ ಅಮೇರಿಕನ್ ಜನರ ಸಹವಾಸದಿಂದಲೂ ಅವರು ದಿನ ದಿನಕ್ಕೆ ತಿದ್ದುತ್ತ ನಡೆದಿದ್ದಾರೆ.

## ೫ ಪೊಲಿನೀಶಿಯಾ (ಬಹಳ ದ್ವೀಪಗಳು)

ಪೋಲಿನೀಶಿಯಾ, ಊರ್ಫ ಸೌಥಸೀ ಐಲಂದ ಎಂಬ ದ್ವೀಪಗಳ ಗುಂಪು ಓಶಿಯಾನಿಯಾದ ಆಗ್ನೇಯ ಭಾಗವದೆ.

ಸಾಂದ್‌ವಿಚ ದ್ವೀಪಗಳು:–ಈ ಸಮುದಾಯದೊಳಗೆ ಹಾವಾಈ ಎಂಬ ದ್ವೀಪವು ಎಲ್ಲಕ್ಕೂ ದೊಡ್ಡದುಂಟು. ಈ ಗುಂಪಿನಲ್ಲಿ ಓಆಹೂ ಎಂಬ ದ್ವೀಪದೊಳಗೆ ಹೊನೋಲುಲು ಎಂಬ ಮುಖ್ಯ ಪಟ್ಟಣವದೆ.

ಸಾಂದ್‌ವಿಚ ದ್ವೀಪಗಳ ಅರಸನು ಕ್ರಿಸ್ತಿಧರ್ಮನನ್ನು ಸ್ವೀಕರಿಸಿದ್ದರಿಂದ, ಆ ದ್ವೀಪಗಳಲ್ಲಿ ಬಹುಜನರು ಆ ಧರ್ಮವನ್ನು ಕೈಕೊಂಡಿದ್ದಾರೆ.

ಇವಲ್ಲದೆ ಪಶ್ಚಿಮದಿಂದ ಆರಂಭ ಮಾಡಿ ಕೆಳಗೆ ಬರೆದಂತೆ ೮ ಸಮುದಾಯಗಳು ಈ ಗುಂಪಿನಲ್ಲಿರುತ್ತವೆ.

೧. ಫ್ರೆಂದಲೀ ದ್ವೀಪಗಳು.
೨. ಸಾಮೊಆ ಊರ್ಫ ನಾವಿಗೇತರ್ಸ, ದ್ವೀಪಗಳು.
೩. ಕೂಕ್ಸ ದ್ವೀಪಗಳು.
೪. ಸೊಸೈತೀ ದ್ವೀಪಗಳು.
೫. ಆಸ್ಟ್ರಲ ದ್ವೀಪಗಳು.
೬. ಲೊ. ಆರ್ಕಿಪೇಲಾಗೊ.
೭. ಮಾರ್ಕ್ವೀಸಾ ದ್ವೀಪಗಳು.
೮. ಈಸ್ಟರ ದ್ವೀಪಗಳು.

ಈ ಗುಂಪಿನ ಹವೆ ಮೇಲಾದದ್ದೂ ಭೂಮಿ ಫಲವುಳ್ಳದ್ದೂ ಇರುತ್ತದೆ. ಇವುಗಳಲ್ಲಿ ಬಹುತರ ಮಲಾಯಿ ಜನರು ವಾಸಿಸುತ್ತಾರೆ. ಇವರ ಪೂರ್ವದ ಕಾಡುಸ್ಥಿತಿಯು ಪಾದ್ರಿಜನರ ಸಹವಾಸದಿಂದ ಸುಧಾರಿಸುತ್ತ ನಡೆದದೆ. ಸೊಸೈತೀ ದ್ವೀಪಗಳಲ್ಲಿ ತಾಹಿತೀ ಎಂಬ ನಡುಗಡ್ಡೆಯು ಬಹು ರಮಣೀಯವೂ ಬೆಳೆಯುಳ್ಳದ್ದೂ ಇರುತ್ತದೆ. ಮಾರ್ಕ್ವೀಸಾ, ಸೊಸೈತೀ, ಲೋಆರ್ಕಿಪೇಲಾಗೋ, ಈ ಮೂರು ಸಮುದಾಯಗಳು ಫ್ರೆಂಚರ ವಶದಲ್ಲಿರುತ್ತವೆ.



